ಶ್ರೀ ರಾಮಸಹಾಯಂ

॥ ಶ್ರೀ ಲಕ್ಷ್ಮೀನೃಸಿಂಹ ಪ್ರಸನ್ನ ॥

ಶ್ರೀ ಸೀತಾಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ ಶ್ರೀರಾಮಚಂದ್ರ ಪರಬ್ರಹ್ಮಣೇನಮಃ

ನವಸಾಲಪುರೀ ಶ್ರೀ ತಿಪ್ಪಣಾರ್ಯ ಕವಿವರ್ಯ ವಿರಚಿತ

ಯಕ್ಷಗಾನ

# ಶ್ರೀ ಕುಚೇಲೋಪಾಖ್ಯಾನವು

ಹರಿಃ ಓಂ.

ಶಾರ್ದೂಲವಿಕ್ರೀಡಿತ ವೃತ್ತ:—

ಶ್ರೀಲೀಲಾಂಗದಿ ಯಾನಮತ್ತ ಗಜಸಿಂಹಾಲೋಕನಂಗೈದು ಶಾಂ
ತಾಲಂಕಾರವಮಾಣೆ ಲಕ್ಷ್ಮಿಕುಚದುರ್ಗಾಭ್ಯಂತರಪ್ರಾಂತ್ಯಮಂ
ಸೋಲಲ್ ಮೆಚ್ಚಿ ನಿಜಾಂಕದೋಳ್ ಸಿರಿಯನಿಟ್ಟೀಲೋಕಮಂ ಪಾಲಿಪ
ಶ್ರೀಲಕ್ಷ್ಮೀಪತಿಯಾದ ಖಾದ್ರಿ ನರಸಿಂಹಸ್ವಾಮಿಯಂ ಧ್ಯಾನಿಪೆಂ

ಶ್ಲೋಕ:—

ಶಶನಿಯುತ! ಪ್ರಕಾಶ ಚಾರುಹಸ್ತಾಬ್ಜ ಪಾಶ
ಅಸಮಸುಗುಣಕೋಶ ಆಶ್ರಿತಾಘೌಘನಾಶ
ಅಸಿತ ಕರಿಮುಖೇಶ ಆದಿಪೂಜಾ ನಿವೇಶ
ಪಶುಪತಿಸುತಧೀಶ ಪಾಹಿಮಾಂ ಶ್ರೀ ಗಣೇಶ

ರಾಗ ನಾಟಿ ಝಂಪೆತಾಳ

ಜಯಜಯ ಜಯಜಯ ಪ

ಜಯಜಯತು ಶ್ರೀ ವಿಘ್ನರಾಜ ರವಿಶತತೇಜ
ಜಯಜಯತು ಶಿವತನುಜ ಭಕ್ತಸುರಭೂಜ ಅ

ದಂತಿವದನನೆ ಏಕದಂತ ಲಂಬೋದರನೆ
ಚಿಂತಿತಾರ್ಥವನೀವ ಸಿದ್ಧಿಗಣಪತಿಯೆ
ಅಂತರಂಗದಿ ನಿನ್ನ ಪಾದಗಳ ಭಜಿಸುವೆನು
ಸಂತಸದಿ ಕರುಣಿಪುದು ಮತಿಗೆ ಮಂಗಳವ ೧

ಅಂಬಿಕಾಸುತನೆ ಹೇರಂಬ ಗಣನಾಯಕನೆ
ನಂಬಿದರ ಪೊರೆವ ಶುಕ್ಲಾಂಬರಧರನೆ
ತಂಬಿಟ್ಟು ಚಿಗುಳಿ ನೆನೆಗಡಲೆ ಮೋದಕದಿ ಬಲ
ಗೊಂಬೆ ನಿನ್ನನು ಪಾಲಿಸೆನಗೆ ಶುಭ ಫಲವ ೨

ಕಾಮರೂಪನೆ ದಿವ್ಯ ಪಾಮನಾಂಗನೆ ಪುಣ್ಯ
ನಾಮ ವಿದ್ಯಪ್ರದಾಯಕನೆ ವಿನಾಯಕನೆ
ಸಾಮಗಾನಪ್ರಿಯನೆ ಸಕಲ ಸುರಪೂಜಿತನೆ
ಸ್ವಾಮಿ ನವಸಾಲ ಖಾದ್ರೀಶಾಪ್ತಸುತನೆ ೩

ವಚನ—

ಈ ಪ್ರಕಾರದಿಂದ ವಿಘ್ನೇಶ್ವರನಂ ಪ್ರಾರ್ಥಿಸಿ ವಾಗ್ದೇವಿಯನೇನೆಂದು ಕೊಂಡಾಡುತಿರ್ದನು —

ರಾಗ ರೇಗುಪ್ತಿ ಆದಿತಾಳ

ವಾಣೀ ಸಲಹೆ ಅಂಬಾದೇವಿ ಪ.

ವಾಣಿ-ಸಲಹೆನ್ನ ಶುಕವಾಣಿ
ಪುಸ್ತಕ ವೀಣಾಪಾಣಿ
ವಿಭವಾನ್ವಿತೆ ಬಂಭರವೇಣಿ
ಮಂಗಳಫಲದೆ ಕಲ್ಯಾಣಿ, ಸುಶ್ರೋಣಿ ಅ.

ತಾಯೆ-ಸನ್ಮತಿಪ್ರದಾಯೆ
ಧವಳಾಂಬುರುಹ ಸ್ಥಾಯೆ
ಚತುರಾಸ್ಯನ ಪಟ್ಟದ ಜಾಯೆ
ಸಕಲಾಗಮ ಸನ್ನುತ ಪ್ರೀಯೆ
ನಿಖಿಲಾಗಮ ವರಮುನಿಗೇಯೆ, ನಿಶ್ರೀಯೆ ೧

ಅಂಬೆ-ನಾನನ್ಯರ ನೆರೆನಂಬೆ
ಆನನಜಿತ ಶಶಿಬಿಂಬೆ
ಲಾವಣ್ಯದಿ ಪುತ್ಥಳಿಬೊಂಬೆ
ವಿದ್ವನ್ನುತ ಸುಗುಣಕದಂಬೆ
ಎನಗಮೃತದ ನುಡಿಗಳ ತುಂಬೆ, ಮದಂಬೆ ೨

ಜಾಣೆ-ವರ ಕರರಾಜಿತ ವೀಣೆ
ಸಮ ನಿನಗಿತರರ ಕಾಣೆ
ಕರುಣಾರಸ ಭರಣ ಪ್ರವೀಣೆ
ವಿದ್ಯಾವಿತರಣ ಬಿನ್ನಾಣೆ
ಖಾದ್ರೀಶನ ಭಕ್ತತ್ರಾಣೆ, ಎನ್ನಾಣೆ ೩

ಸೀಸಪದ್ಯ:—

ವಾಣೀಶನಡಿಗಳಂ ವರ್ಣಿಸಿ-ಭಾರತೀ
ಪತಿಯಾದ ಶ್ರೀ ಜಗತ್ಪ್ರಾಣಗೆರಗಿ
ಪಾರ್ವತೀನಾಥಂಗೆ ಬಲವಂದು ಶಚಿಸಮಾ
ಹಿತನೆಂದೆನಿಪ ಬಲಾಹಿತನ ಭಜಿಸಿ
ಇತರ ದೇವರ್ಕಳಂ ಸ್ತೋತ್ರವಂ ಗೈದು ವಾ
ಲ್ಮೀಕಾದಿ ಸುಕವಿವರ್ಗಗಳ ಸ್ತುತಿಸಿ
ಶ್ರೀಪಾದರಾಯರಾ ಶ್ರೀಪದಾರ್ಚಕನಾಗಿ
ಮಾತಾಪಿತೃಗಳಂ ಮನದಿ ನೆನೆದು

ಶ್ರೀಹರಿಯ ಭಕ್ತನಾದ ಕುಚೇಲನಾಮ
ವಿಪ್ರಚಾರಿತ್ರಮಂ ಪೇಳ್ವೆ ವಿನಯದಿಂದ
ಸುಜನರಾಲೈಸುವುದು ಮಹಾ ಶುಭಮಿದೆಂದು
ಇಹಪರಂಗಳ ನೀವುದೀ ಮಹಿಯೊಳೆಂದು

ಚಂಪಕಮಾಲಾ ವೃತ್ತ:—

ಯತಿಗಣನೇಮ ಪ್ರಾಸಗಳ ನಾನರಿಯೆಂ ಸುಕವೀಂದ್ರರಂತೆ ಸಂ
ಸ್ಕೃತಪದಶಬ್ದ ಶಾಸ್ತ್ರಗಳ ಶೋಧನೆಗೈದವನಲ್ಲವಿನ್ನು ಪ್ರಾ
ಕೃತವಹ ಕಾವ್ಯಸಂಗತಿಯ ಕೇಳಿದುದಿಲ್ಲ ನೃಸಿಂಹನಾದ ಶ್ರೀ
ಪತಿಯ ಕಟಾಕ್ಷವೀಕ್ಷಣಕೆ ಭಾಜನನಾಗಿದಪೇಳ್ವೆ ಭಕ್ತಿಯೊಳ್

ಅಡಿಯಿಡಲಾರದರ್ಭಕರು ಆಡುತಲರ್ಥಗಳಿಲ್ಲದೇ ತೊದಲ್
ನುಡಿಗಳನಾಡೆ ಲಾಲಿಸದೆ ನೂಕಿಪರಿಲ್ಲದರಂತೆ ಎನ್ನ ತ
ಪ್ಪಡಸಿದ ವಾಕ್ಯಜಾಲಗಳ ಪಂಡಿತರಾಲಿಸಿ ಕೇಳಿರ್ಪ್ರಯ ನಿ
ಮ್ಮಡಿಗಳಿಗಾಂ ನಮಸ್ಕರಿಸಿಯಂಜುತ ಬಿನ್ನಪಗೈವೆ ನಿಂಪಿನೊಳ್

ಕಂದ —

ಸದ್ವಿನಯ ಭಕ್ತಿಯಿಂದಲಿ
ಸದ್ವೈಷ್ಣವನಹ ಕುಚೇಲಚಾರಿತ್ರವನಾ
ವಿದ್ವತ್ಕೋಟಿ ಜನಂಗಳ
ಹೃದ್ವನಜಾನಂದ ಮಾಗಲೊರೆವೆಂಮುದದೊಳ್

ದ್ವಿಪದಿ—

ಶ್ರೀರಮಾರಮಣನಿಗೆ ಶೃಂಗಾರಹಾರನಿಗೆ
ಮಾರಜನಕನಿಗೆ ಸುಕುಮಾರವಿಗ್ರಹಗೆ

ಕರಿರಾಜ ವರದನಿಗೆ ಕಮಲಾಯತಾಕ್ಷನಿಗೆ
ಪರಮಾತ್ಮನಿಗೆ ಸಕಲ ಭಕ್ತವತ್ಸಲಗೆ

ಪಾಂಡವ ಪ್ರಿಯನಿಗೆ ಫಣಿರಾಜಶಯನನಿಗೆ
ಖಂಡೇಂದುಧರಸಖಿಗೆ ಕರುಣಜಲನಿಧಿಗೆ ೩

ಪ್ರಹ್ಲಾದವರದನಿಗೆ ಭವಭಯವಿದಾರನಿಗೆ
ಅಹಲ್ಯಾಘವಿದಳನಿಗೆ ಅಂಬುಜೋದರಗೆ ೪

ಅದ್ರೀಶಧರನಿಗೆ ಸಮುದ್ರತಲ್ಪನಿಗೆ ಬಹು
ಭದ್ರದಾಯಕಗೆ ಶ್ರೀ ಖಾದ್ರಿನರಹರಿಗೆ ೫

ವಚನ —

ಅಂಕಿತವಾಗಿ ಸಕಲ ದೇವತಾಪ್ರಾರ್ಥನೆಯಂ ಮಾಡಿ ಶ್ರೀ ಬಾದರಾಯಣದೇವರಿಂ ವಿರಚಿತವಾದ ಭಾಗವತ ಪುರಾಣದೊಳ್ ನಿರೂಪಿಸಿರುವ ಕುಚೇಲೋಪಾಖ್ಯಾನವೆಂಬ ಪುಣ್ಯಕಥಾ ಪ್ರಾರಂಭವದೆಂತೆನೆ.—

ದ್ವಿಪದಿ —

ಶ್ರೀರಮ್ಯತರವಾದ ಶೃಂಗಾರವಾದ
ಧಾರುಣೀವಧುವಿನ ದರ್ಪಣವಿದೆನಲು ೧

ನೈಮಿಶಾರಣ್ಯ ಪುಣ್ಯಾಶ್ರಮಾವನಿಯು
ಕಾಮಿತ ಸಕಲಸೌಖ್ಯ ಪ್ರದಾಯಕವು ೨

ಚಾರುತರಾನಂದ ಸಂಭ್ರಮಾನ್ವಿತವು
ಭೂರುಹಂಗಳು ಕಲ್ಪಭೂರುಹವಾಗಿ ೩

ಕುಸುಮಗಳ್ ಮಂದಾರಕುಸುಮ ಶೋಭಿತವು
ಹಸನಾದ ಫಲ ಸುಧಾರಸದಿ ಪೂರಿತವು ೪

ಸರಸುಗಳ್ ಮಾನಸ ಸರಸಿಗಿಮ್ಮಿಗಿಲು
ವರಲತಾವಳಿ ಸುಪ್ರವಾಳದ ಲತೋಪಮವು ೫

ಪಕ್ಷೀಶಗೆಣೆಯಾದ ಪಕ್ಷಿವೃಂದಗಳು
ಸಾಕ್ಷಾತು ವೈಕುಂಠ ಸಮಕುಟೀರಗಳು ೬

ಕರಿಕುಲಾಧಿಪನ ದಿಕ್ಕರಿಪ ಮೃಗತತಿಯು
ಭರಿತಸೌರಭ ಮಲಯ ಗಿರಿಯ ಸೋಲಿಸಲು ೭

ಶಿಲೆಗಳೆಲ್ಲವು ರತುನ ಶಿಲೆಗಳಾಗಿಹವು
ಜಲವೆಲ್ಲ ಸ್ವರ್ನದೀ ಜಲಕೆ ಉಪಮಿತವು ೮

ಇಳೆಯೆಲ್ಲಪರಿಪೂರ್ಣ ಹೇಮಸನ್ನಿಭವು
ಲಲಿತವಾಗಿಹ ಜೀವಕೋಟಿ ರಾಶಿಗಳು ೯

ಭಾಗ್ಯವೇನೆನಲು ವೈರಾಗ್ಯಭಾಗ್ಯಗಳು
ಯೋಗ್ಯವೆಂತೆನೆ ಮುಕ್ತಿಯೋಗ್ಯವಾಂತಿಹುದು ೧೦

ಜಾತಿವೈರವ ಮರೆದು ಸಾರ್ವಕಾಲದಲಿ
ನೀತಿಯಿಂದಿರುತಿರುವ ನಿಖಿಲವಸ್ತುಗಳು ೧೧

ಶುಭಮಾದರಣ್ಯವೀ ವಿಷ್ಣುಕ್ಷೇತ್ರದಲಿ
ಪ್ರಭುವಾದ ಶ್ರೀಹರಿಯ ಪದಪರಾಯಣರು ೧೨

ಶೌನಕಾದ್ಯಖಿಲ ಸನ್ಮೌನಿಪುಂಗವರು
ಮಾನಿತಜನಪೂತ ಮಹಿತವಿಖ್ಯಾತ ೧೩

ಸಕಲ ವೇದೋಪೇತ ಸತ್ಯಸಮೇತ
ನಕಳಂಕ ಗುಣಜ್ಞನಹುದೆಂಬ ಸೂತ ೧೪

ಪೌರಾಣಿಕನಿಗೆ ನಮಿಸಿ ಭಾಗವತಾಖ್ಯ
ಪೌರಾಣಕೇಳುತ್ತ ಬ್ರಾಹ್ಮಣೋತ್ತಮರು ೧೫

ಹರಿದಾಸರುಗಳಾದ ಗುರುಭಕ್ತರಾದ
ಪರಮ ಪುಣ್ಯಾತ್ಮರವರಚರಿತ್ರೆಯನು ೧೬

ಕರುಣಿಪುದೆನೆ ರೋಮಹರುಷಣಿಯಾಗ
ಹರುಷಾಶ್ರುಪೂರದಿಂ ಹರಿಯ ಸಂಸ್ಮರಿಸಿ ೧೭

ಪ್ರಾಯೋಪವೇಶ ಸಂಭ್ರಮದೀಕ್ಷಿತನಾದ
ರಾಯಪರೀಕ್ಷಿತ ರಾಜಶೇಖರಗೆ ೧೮

ಮುಕುತಿದಾಯಕ ವ್ಯಾಸಮುನಿಪುತ್ರನಾದ
ಶುಕಯೋಗಿ ಪೇಳ್ದ ಸುಧಾಮಚರಿತೆಯನು ೧೯

ನಿಮಗೆ ಪೇಳುವೆನೆಂದು ನಿಶ್ಚಿಂತನಾಗಿ
ವಿಮಲಮಾನಸದಿಂದ ವಿಪ್ರೇಶನಾದ ೨೦

ಶೌನಕಾದಿಮುನೀಂದ್ರ ಸಭೆಕೇಳುತಿರಲು
ಮೌನೀಶನಹ ಸೂತಮುನಿಪನಿಂತೆಂದ ೨೧

ವಚನ:—

ತತ್ಕಥಾಕ್ರಮವೆಂತೆನೆ.—

ತ್ರಿಪದಿ —

ಶ್ರೀರಮಾಪತಿಯಾದ ಕೃಷ್ಣನ
ದ್ವಾರಕೆಗೆ ಮೂರೊಂದು ಯೋಜನ
ದೂರದಲ್ಲಿರುತಿಹುದು ಪುಣ್ಯಾಗಾರವೊಂದು ೧

ಅಗ್ರಹಾರದಿ ಬ್ರಹ್ಮದೇವನೊ
ಳಗ್ರಪೂಜೆಗೆ ಯೋಗ್ಯರಾಗಿಹ
ಅಗ್ರಗಣ್ಯರು ನೆಲೆಸಿಹರು ವಿಬುಧಾಗ್ರಣಿಗಳು ೨

ಸತ್ಯಶೌಚಾಚಾರನಿಷ್ಠರು
ನಿತ್ಯನೈಮಿತ್ಯದೊಳಗಧಿಕರು
ಪ್ರತ್ಯಹದೊಳೌಪಾಸನಾನ್ವಿತರತ್ಯಧಿಕರು ೩

ವೇದಶಾಸ್ತ್ರಪುರಾಣ ನಿಪುಣರು
ವಾದದಲಿ ನಿರುಪಮ ಮಹಿಮ್ನರು
ಸಾದರರು ಚೌಷಷ್ಠಿವಿದ್ಯಾವೋದಯುತರು ೪

ಜ್ಞಾನವಂತರು ಮಾನನಿಧಿಗಳು
ದಾನಶೀಲರು ಧರ್ಮಪಾಲರು
ಶ್ರೀನಿವಾಸನ ಪಾದಕಮಲ ಧ್ಯಾನಪರರು ೫

ಕಂದ:—

ಮಡದಿ ಮನೆಮಕ್ಕಳಿಂದಂ
ಉಡುಗೆ ತೊಡಿಗೆ ಸೌಭಾಗ್ಯದ ಸಡಗರದಿಂದಂ
ಬಡತನಗಳಡಸಿ ಕಾಣದ
ಪೊಡವೀಸುರರಿರ್ದರಧಿಕ ಪುಣ್ಯದ ಫಲದೋಳ್

ವಚನ:—

ಇಂತಪ್ಪ ಪುಣ್ಯಾಗಾರವೆಂಬ ಅಗ್ರಹಾರದೋಳ್ ಬ್ರಾಹ್ಮಣೋತ್ತಮರ ಮಧ್ಯದಲ್ಲಿರುತಿರ್ದ ಶ್ರೀ ಹರಿಯ ಭಕ್ತನಾದ ಬ್ರಾಹ್ಮಣೋತ್ತಮನಾದ ಕುಚೇಲನ ವೃತ್ತಾಂತಮದೆಂತೆನೆ.—

ಝಂಪೆ —

ಚಿತ್ರವಿಶ್ವಾಮಿತ್ರಗೋತ್ರ ಸುಪವಿತ್ರ ಚಾ
ರಿತ್ರ ನಿರ್ಮಲಗಾತ್ರ ಮಿತ್ರಸನ್ನಿಭನು ೧

ವರಸುಶೀಲಾನಾಮ ತರುಣೀ ಮನೋರಮಣ
ಕರುಣಾರಸಾಭರಣ ಹರಿಚರಣಶರಣ ೨

ಪ್ರಿಯಳಿಂದ ವರಚತುಷ್ಟಯ ಪುತ್ರರಿಂದಗ
ನ್ಮಯನಾದ ಹರಿಪದಾಶ್ರಯನಾಗಿ ಇರುವ ೩

ರಾಗ ಕಲ್ಯಾಣಿ ಝಾಪುತಾಳ

ಭೂಸುರನಿರುತಿರ್ದನು ಕುಚೇಲಾಖ್ಯ
ಭೂಸುರನಿರುತಿರ್ದನು ಪ

ಭೂಸುರನಿರುತಿರ್ದ ವಾಸುದೇವನ ನಂಬಿ
ಭಾಸಮಾನ ಮನೋಲ್ಲಾಸ ವೈರಾಗ್ಯದಿ ಅ.

ಸ್ನಾನಸಂಧ್ಯಾನದಿಂದ, ಸದ್ಗುರುಮಂತ್ರ
ಧ್ಯಾನಮೌನಂಗಳಿಂದ

ಜ್ಞಾನಸಾಧನಗಳಿಂದ, ಅಷ್ಟಾಂಗಯೋ
ಗಾನು ಸಂಧಾನದಿಂದ
ಮಾನಸದೊಳು ಪರಮಾನಂದಭರಿತದಿ
ಶ್ರೀ ನಾರಾಯಣನಾದ ಶ್ರೀನಿವಾಸನಭಕ್ತ ೧

ಪರ್ಣಾಹಾರಂಗಳಿಂದ, ತನ್ನಯ ನಿಜ
ವರ್ಣಕರ್ಮಂಗಳಿಂದ
ಪರ್ಣಕುಟೀರದಲ್ಲಿ, ವೈಷ್ಣವಧರ್ಮ
ನಿರ್ಣಯಮಾರ್ಗದಲಿ
ಜೀರ್ಣಾಂಬರವನುಟ್ಟಹರ್ನಿಶಿಯಲಿ ಸಂ
ಪೂರ್ಣಕಾಮನ ಸುಪರ್ಣಧ್ವಜನದಾಸ ೨

ಚಿತ್ತಚಂಚಲವಿಲ್ಲದೆ, ಅಯಾಚಿತ
ವೃತ್ತಿಯಿಂ ಯಾಚಿಸದೆ
ಸತ್ವಗುಣಾತೀತದಿ, ಶ್ರೀಹರಿಯು ಸ
ರ್ವೋತ್ತಮಭಾವದಲಿ
ಉತ್ತಮರೆಷ್ಟು ತಂದಿತ್ತುದೆ ಘನವೆಂದು
ಚಿತ್ತದೋಳ್ ಖಾದ್ರಿನೃಸಿಂಹನ ಬಚ್ಚಿಟ್ಟು ೩

ಏಕತಾಳ.—

ಹರಿಯನೆ ಭಜಿಪ ಶ್ರೀಹರಿಯನೆ ಪೂಜಿಪ
ಹರಿಯ ಧ್ಯಾನಿಪ ನರಹರಿಗೆರಗುವನು ೧

ಮನವಚನಾಂಗದಿ ಮನೆವಾರುತೆಯನು
ನೆನೆಯದಲನುದಿನವನು ಕಳೆಯುವನು ೨

ಸುತ್ತುವ ಪುನರಾವರ್ತಿಯ ಗೆಲಿಸುವ
ವಸ್ತುವಿನಲಿ ತನ್ನ ಚಿತ್ತವನಿಡುವ ೩

ಭಕ್ತಿಯಮಾಡುವ ಮುಕ್ತಿಯನೈದುವ
ಯುಕ್ತಿಯನೆಣಿಸಿ ವಿರಕ್ತಿಯೊಳಿರುವ ೪

ಪರಮಾತ್ಮನ ನಿಜಶರಣರ ಕಾಣಲು
ಚರಣಗಳಿಗೆರಗಿ ಕರಗಳ ಮುಗಿವ ೫

ಕಂದ:—

ಹರಿದಾಡುವ ಮನವಂ ಶ್ರೀ
ಹರಿಚರಣದೊಳಿಟ್ಟು ದೇಹದಭಿಮಾನವ ಸಂ
ಹರಿಸಿ ವರರಾಜಯೋಗದಿ
ಹರಿಶರಣರ ದೇವನಿರುವ ನಾನಂದದೊಳುಂ

ವಚನ:—

ಇಂತಪ್ಪ ಕುಚೇಲನಂ ಮತ್ತೇನೆಂದು ಪೊಗಳುತಿರ್ದನು:—

ರಾಗ ಪಂತುವರಾಳಿ ಅಟತಾಳ

ಬ್ರಾಹ್ಮಣೋತ್ತಮನೆಸೆದನು ಪರ
ಬ್ರಹ್ಮ ಕೃಷ್ಣನ ಸಖನಾದ ಸುಧಾಮಾಖ್ಯ ಪ.

ಹರಿಯೆ ಸರ್ವೋತ್ತಮನೆಂಬ ನಿಶ್ಚಯುವಾಗಿ
ವರರಮಾದಿಗಳು ಡಿಂಗರಿಗರೆಂಬ
ಪರಮ ತಾರತಮ್ಯ ನೆಲೆಯಾದ ಸುಜ್ಞಾನ
ಭರಿತನಾಗಿ ಭಕ್ತಿ ವೈರಾಗ್ಯ ಚಲಿಸದೆ
ಅರಿಷಡ್ವರ್ಗಗಳ-ಬಾಧೆಯ ಪರಿ
ಹರಿದು ಸುಖದುಃಖದ-ಜಂಜಡಗಳ
ತೊರೆದು ಮಾನಪಮಾನದ-ಸಂಕಲೆಗಳ
ತರಿದು ಲಾಭಾಲಾಭದ-ಬಲೆಯದಾಂಟಿ
ನಿರುತ ಸಂತುಷ್ಟ ಮಾನಸನಾಗಿ ನಲಿವುತ ೧

ಸಿರಿಯರಸನ ದಾಸರ ಸಂಗದಿರವಾಗಿ
ಗುರುವರನುಪದೇಶವ ಪಡೆದು
ಮರೆಯದೆ ಶ್ರವಣ ಮನನ ನಿಧಿಧ್ಯಾಸನಾ
ದಿ ರಹಸ್ಯಮಾರ್ಗದಿ ಸಮಚಿತ್ತನಾಗಿ

ಪರಧನ ಪರಸತಿಯ - ಮೇಲಾಸೆಯ
ಜರಿದು ನಿಂದ್ಯಾಸ್ತುತಿಯ - ಬಂಧನವನ್ನು
ಪರಿದು ದುಸ್ಸಂಸಾರದ - ಕೋಟಲೆಗಳ
ನಿರಿದು ದುರ್ಜನಸಂಗದ - ದಾರಿಯಬಿಟ್ಟು
ಭರದಿ ದೇಹಾಭಿಮಾನವ ಪರಿಹರಿಸುತ್ತ ೨

ತನುವು ಮಸ್ತಕ ಕಂಠ ಸಮದಿಧಾರಣೆಗೈದು
ವಿನುತ ಸುಸ್ಥಿರದಿ ನಿಶ್ಚಲನಾಗುತ
ಕೊನೆಯ ನಾಸದಿ ದೃಷ್ಟಿನಿಲಿಸಿ ತಾನನ್ಯಗ
ಳನು ವೀಕ್ಷಿಸದೆ ಶಾಂತನಾಗಿ ನಿರ್ಭಯದಿಂದ

ಘನಕೋಪ ತಾಪಗಳ - ಪಿಶಾಚವ
ಟೊಣೆದು ಚಿಂತಾರೂಪದ - ವಾರ್ಧಿಯ ಪೀರ್ದು
ತಣಿದು ನಿದ್ರಾಹಾರದ - ಭಯಂಗಳ
ಹಣಿದು ತಾಮಸರಾಜಸ - ಗುಣಂಗಳ
ನೆಣಿಸದೆ ಶುದ್ಧ ಸಾತ್ವಿಕ ತಾನಾಗುತ ೩

ಮಾನಸ ಚಲಿಸದೆ ಹರಿಯಲ್ಲಿ ಬಹುವಾಗಿ
ಧ್ಯಾನಿಸಿ ಪರಮಾತ್ಮನ ರೂಪವ
ಜ್ಞಾನದೃಷ್ಟಿಯನು ಸುಷುಮ್ನ ದ್ವಾರದೊಳಿಟ್ಟು
ಶ್ರೀನಿವಾಸನ ಅಪರೋಕ್ಷದೊಳೀಕ್ಷಿಸಿ

ಹಾನಿಯಶೋವೃದ್ಧಿಯ - ನಳಿದು ಇಂದ್ರಿ
ಯಾನುಭವದ ಬೇಗೆಯ - ನಂದಿಸಿ ಅನು
ಮಾನ ದುಷ್ಕೃತ ಪಾಶವ - ಛೇದಿಸುತ ದೇ
ಹಾನು ಬಂಧಿಗಳಂಗದ - ಸದಾನುಭ
ವಾನಂದ ವಾರ್ಧಿಯೊಳೋಲಾಡಿ ನಿರುತದಿ ೪

ಮಂಗಳಕರ ವಿರಜಾನದಿಯೊಳು ಮಿಂದು
ಲಿಂಗದೇಹ ಭಂಗಮಾಗಿ ಪೋಗಿ
ರಂಗನಂದದಿ ಚತುರ್ಭುಜ ಶಂಖಚಕ್ರಾದಿ
ಶೃಂಗಾರನಾಗಿ ವೈಕುಂಠ ಪುರದಿ ಮು

ಕ್ತಾಂಗನೆಯೊಳು ನೆರೆದು - ಮುಕ್ತಜನ
ಸಂಗದೊಳಗೆ ಬೆರೆದು - ಜೀವತ್ವವು
ಹಿಂಗೆ ಸುಧೆಯು ಸವಿದು - ಪುನರ್ಜನ
ನಂಗಳಡಗಿ ಸುಖದಿ - ಖಾದ್ರಿ ನರ
ಸಿಂಗನ ಭವ್ಯಲೀಲಾಂಗನ ಭಜಿಸುತ ೫

ವಚನ —

ಈ ಪ್ರಕಾರದಿಂದ ಕುಚೇಲನು ಜ್ಞಾನ ಭಕ್ತಿ ವೈರಾಗ್ಯಭಾಗ್ಯದಿಂದ ಯೋಗ್ಯನಾಗಿ ಇಹಲೋಕಾಪೇಕ್ಷೆಯಂ ಮರೆದು ಪರಲೋಕ ಸಾಮ್ರಾಜ್ಯಾಸಕ್ತನಾಗಿ ಶ್ರೀಹರಿ ಪದಪಾರಾಯಣನಾಗಿರುತ್ತಿರಲು ಈತನ ಧರ್ಮಪತ್ನಿಯಾದ ಸುಶೀಲಾದೇವಿಯ ವೃತ್ತಾಂತವಂ ಪೇಳುವನೆಂತೆನೆ:—

ಯಾಲಪದ·—

ಈ ರೀತಿಯಿಂದಿರುವ ಕುಚೇಲನ ಪುಣ್ಯಾಂಗನೆ ಸು
ಶೀಲೆ ಬಾಲೇಂದು ಸಮುಫಾಲೆ, ಪ್ರಾಣೇಶಗನು
ಕೂಲೆ ಸದ್ಗುಣಕಾಲವಾಲೆ ೧

ಸುಂದರಗಾತ್ರೆ ದಿವ್ಯ ಅರವಿಂದ ಪತ್ರಾಯತನೇತ್ರೆ
ಕುಂದರದನೆ ಮಂದಗಮನೆ, ನಿರುಪಮಾನ
ದಿಂದಲೆಸೆವ ಕಸ್ತೂರಿಪಣೆ ೨

ಪತಿಯೆ ಪರದೈವವೆಂದು ಪತಿಯೆ ಸರ್ವಸ್ವಾಮಿಯೆಂದು
ಪತಿಯೆ ಸದ್ಗುರು ರಾಯನೆಂದು, ಭಾವಿಸಿ ತನ್ನ
ಪತಿಯ ಶುಶ್ರೂಷೆಯ ಮಾಳ್ಪಳು ೩

ಸಾವಿತ್ರಿ ಗಾಯಿತ್ರಿ ಗೌರಿದೇವಿಯರುಂಧತಿತಾರೆ
ಭೂವಧೂ ವರಾನುಸೂಯ, ದೇವಿ ಮುಖ್ಯರಂದದಿ
ಪಾವನೆಯಾದ ಪತಿವ್ರತೆ ೪

ನಿತ್ಯ ಮಂಗಳಾಕಾರದಿ ಸತ್ಯಸದಾಚಾರದಿಂದ
ಅತ್ಯಂತ ಭಕ್ತಿಭಾವದಿಂದ, ಪುರುಷಾಂತರ್ಯಾಮಿ
ವಸ್ತು ಕೃಷ್ಣನ ಧ್ಯಾನಿಪಳ್ ೫

ತ್ರಿಪದಿ:—

ಮಲಿನ ವಸನದೊಳಿರುವ ನಿರುಪಮ
ಮಣಿಯ ತೆರದೀಬಾಲಿಕೆಯು ತಾ
ಮಲಿನ ವಸನವನುಟ್ಟು ದೇಹವ ಬಳಲಿಸುವಳು ೧

ಪುಂಡರೀಕಾಕ್ಷನನು ಭಜಿಸುತ
ಗಂಡ ವೈರಾಗ್ಯದೊಳಗಿರುತಿಹ
ಲಂಡತನದವರಲ್ಲ ಬಾಲರು ಅಂಡಲೆವುತ ೨

ಬಡತನವು ಬೆಂಬಿಡದೆ ಬಾಧಿಸೆ
ತಡೆಯಲಾರದೆ ಬಹಳ ಕಷ್ಟವ
ಪಡುತಲಿರುವಳು ಕೃಶದಿ ಬಳಲುವ ಒಡಲಿನಿಂದ ೩

ತಿರಿದು ತರುವಳು ಪುಣ್ಯವಂತರು
ಕರೆದು ಕೊಡಲದ ತಂದು ಪಾಕವ
ಪರುಠವಿಸಿ ಪತಿ ಸುತರಿಗಿಡುವಳು ಹರುಷದಿಂದ ೪

ಮಿಕ್ಕ ನೈವೇದ್ಯದಲಿ ಸ್ವಲ್ಪವ
ನಕ್ಕರಿಂದಲಿ ತಾನು ಭುಂಜಿಸಿ
ಮಕ್ಕಳಿಗೆ ಬೇಕೆಂದು ಶೇಷವನಿಕ್ಕಿರುವಳು ೫

ಇಲ್ಲವೆಂದೊಬ್ಬರಿಗೆ ಪೇಳಳು
ನಿಲ್ಲಲರಿಯಳು ಒಮ್ಮೆಗನ್ಯರ
ಸಲ್ಲಲಿತ ಗೃಹಗಳಲಿ ಶುಭಕರ ಪಲ್ಲವಾಂಗಿ ೬

ಎಡೆಬಿಡದೆ ದಾರಿದ್ರ್ಯವೀಪರಿ
ಬಿಡದೆ ಇರುತಿರೆ ನಿತ್ಯಸಂಕಟ
ಪಡದೆ ಮಕ್ಕಳ ಕಂಡು ಕ್ಲೇಶವ ಪಡುತಲಿಹಳು ೭

ದ್ವಿಪದಿ:—

ಈರೀತಿಯಲಿ ನಾರಿದಾರಿದ್ರ್ಯವೆಂಬ
ಘೋರಾಂಧಕಾರ ಕಾಂತಾರದೋಳ್ ಸಿಲುಕಿ ೧

ಪತಿಯ ಬಾಧಿಸದೆ ಶ್ರೀಪತಿಯ ನಿಂದಿಸದೆ
ಸತಿಶಿರೋಮಣಿ ತನ್ನ ಪತಿ ಭಕ್ತಿಯಿಂದ ೨

ಧೈರ್ಯವಂ ಬಿಡದೆ ಸದ್ಧರ್ಮ ಮಾರ್ಗದಲಿ
ಆರ್ಯಾದಿ ದೇವತಾರ್ಚನೆಯ ಮಾಡುತಲಿ ೩

ಪತಿಸೇವೆಯಿಂದಿರಲು ಬಾಲೆಯೊಂದುದಿನ
ಸುತ ಚತುಷ್ಟಯರೊಂದು ಜೊತೆಯಾಗಿ ಬಂದು ೪

ಆಡಿಬಂದೆವು ತಾಯೆ ಹಸಿದೆವಮ್ಮಯ್ಯ
ಬೇಡಲಾರೆವು ನಿತ್ಯ ಭಿಕ್ಷಾನ್ನಗಳನು ೫

ಜೊತೆಯ ಬಾಲಕರು ತಮ್ಮ ಸದನಗಳಿಗ್ಹೋಗಿ
ಪ್ರತಿಯಿಲ್ಲದಮೃತಾನ್ನ ಭಕ್ಷ್ಯಭೋಜ್ಯಗಳ ೬

ಬಿಡದೆ ಭುಂಜಿಸಿ ರಾಜಬೀದಿಗಳೊಳಗೆ
ಕಡಲ ಘೋಷದಿ ಚೆಂಡುಗಜ್ಜುಗ ಬುಗುರಿ ೭

ಆಡುತಾರಮ್ಮಯ್ಯ ಅದು ಕಂಡು ನಿನ್ನ
ಬೇಡಬಂದೆವು ತಾಯಿ ಬೇಸರಗೊಳದೆ ೮

ಷಡುರಸಾನ್ನವ ಪಂಚಭಕ್ಷ್ಯಪಾಯಸವ
ತಡವಮಾಡದೆ ನೀನು ಬಡಿಸುದಮ್ಮಯ್ಯ ೯

ಹೊತ್ತುಹೋಯಿತು ಬಹಳ ಹೊಟ್ಟೆಬೆನ್ನಿನಲಿ
ಹತ್ತಿದೆನೋಡಮ್ಮ ಹಸಿವುಘನವಮ್ಮ ೧೦

ಎಂದು ನಾಲ್ವರು ಮಕ್ಕಳಳುತ ಬಾಯಾರಿ
ಬಂದು ಹೊಟ್ಟೆಯತೋರಿ ಬಸವಳಿದು ಕೈಲಿ ೧೧

ಪತ್ರಭಾಜನವಂದು ಬಳಲುತ್ತ ಪದ್ಮ
ನೇತ್ರೆಯಂ ಬೇಡೆ ಬಾಲಕರಿರವ ೧೨

ಕಂಡು ನಿಜಮನದ ಸಂಕಟದಿ ಸಂತಾಪ
ಗೊಂಡು ಮಾರುತ್ತರವ ಕೊಡದೆಮೌನವನು ೧೩

ಧರಿಸಿದಾರಿದ್ರ್ಯಮಂ ಜರಿದು ಅರ್ಭಕರ
ಕರೆದು ಸಂತೈಸಿ ಕುಳ್ಳಿರಿಸಿ ವಿನಯದಲಿ ೧೪

ಪರ್ಯುಷಿತಾನ್ನವಂ ಬಾಲಕರ ಕೈಲಿ
ಧೈರ್ಯದಿಂದೊಂದು ತುತ್ತವಳಮಿಟ್ಟು ೧೫

ಚೆನ್ನೆ ಪುನರಪಿಸುತರ ಬಳಿಕ ಸಂತೈಸಿ
ಎನ್ನಯ್ಯಗಳಿರ ನೀವಿನ್ನಾಡಿಬನ್ನಿ ೧೬

ಎಂದಣುಗರಂ ಕಳುಹಿ ಇಂದಿರಾರಮಣ
ತಂದೆ ನೀನೇಬಲ್ಲೆ ಇಂದೆನ್ನವಿಭವ ೧೭

ಇಂತೆನುತ ಕಾಂತೆ ನಿಶ್ಚಿಂತನಾಗಿರುವ
ಕಾಂತನಂಘ್ರಿಯ ಸಾರಿ ಕೈಗಳಂ ಮುಗಿದು ೧೮

ಮಂದಸ್ಮಿತ ಮುಖಾರವಿಂದಳಾಗುತ್ತ
ಅಂದದಿಂದಿಂತೆಂದಳಾಗಲಾ ನಿಪುಣೆ ೧೯

ಝಂಪೆ:—

ಧರಣಿಯೊಳು ನಿಮ್ಮಂಥ ಹರಿಶರಣರಿಲ್ಲೆಂದು
ಪರಮಭಾಗವತ ಜನರರಿದು ಪೊಗಳುವರು ೧

ಬಹಳ ಭಕ್ತಿಗಳಿಂದಲಹಿಶಯನನಂ ಭಜಿಸ
ಲಿಹಪರದ ಸೌಖ್ಯಮುಂಟೆಂಬರ್ಬೈಬುಧರು ೨

ಇಹಪರಗಳೆಂತೆಂಬ ವಿಹಿತವಾಕ್ಯಾರ್ಥವನು
ಸಹಜದಿಂದೆನಗನುಗ್ರಹಿಸುವುದು ರಮಣ ೩

ವಚನ:—

ಇಂತು ವಿನಯಮಾದ ಭಕ್ತಿಯುಕ್ತಮಾದ ಯುಕ್ತಿಯಿಂದ ಇಹಪರ ಸೌಖ್ಯವೆಂಬ ವಾಕ್ಯಾರ್ಥಮಂ ಪೇಳೆಂದು ಬೆಸಗೊಂಡ ಪುಂಡರೀಕಾಕ್ಷಿಯೊಳ್ ಗಂಡನಾದ ಸುಧಾಮನೇನೆನ್ನುತಿರ್ದನು.—

ರಾಗ ಮುಖಾರಿ ಝಂಪೆತಾಳ

ವನಿತೆಕೇಳಿಹಪರದ ವಾಕ್ಯಾರ್ಥಗಳನು ಪ.

ನಿನಗೊರೆವೆ ಕಮಲದಳನೇತ್ರೆ ಸುಪವಿತ್ರೆ ಅ.

ತರುಣಿಕೇಳ್ ಮಾನವರು ಧರಣಿಯೊಳಗವತರಿಸಿ
ಹರಿಯನೆರೆನಂಬಿ ಸಿರಿಯರಸನಿಂದ
ಕರುಣಿಸಲ್ ಪಟ್ಟಮೇಲ್ ಸಿರಿಯ ಸೌಭಾಗ್ಯದಲಿ
ಮೆರೆವುದೇ ಇಹಲೋಕ ದುರು ಸೌಖ್ಯದಿರವು ೧

ಹರಿಯೆ ಸರ್ವೋತ್ತಮನು ಅಹುದೆಂದು ನೆರೆನಂಬಿ
ನರನು ದೇಹವನು ಪರಿಹರಿಸಿ ಬಳಿಕ
ತೆರಳಿ ವರವೈಕುಂಠಪುರದೊಳಾನಂದದೊಳು
ಇರುತಿಹುದು ಹರಿಯಂತೆ ಪರಸೌಖ್ಯದಿರವು ೨

ಇಂತು ಇಹಪರಸೌಖ್ಯದಂತರಂಗವತಿಳಿದು
ಚಿಂತಾಯಕನನಂಬಿ ಚಿಂತೆಯುಳಿದು
ಕಾಂತೆಕೇಳ್ ಸುಜ್ಞಾನವಂತರೀಪರಿಯ ಶ್ರೀ
ಮಂತ ಖಾದ್ರಿನೃಸಿಂಹನಾಂತು ಭಜಿಸುವರು ೩

ವಚನ:—

ಇಂತೆಂದ ಪತಿಯೊಡನೆ ಸತಿಯೇನೆನ್ನುತಿರ್ದಳು.—

ಕಂದ:—

ನರರೀ ಜನ್ಮದಿ ರಂಗನ
ವರಕಾಯಕ ಯೋಗದಿಂದವಂದಿಸೆ ದಯದೊಳ್
ಕರುಣಿಸನೆ ಸಕಲಭಾಗ್ಯವ
ಪುರುಷಾಗ್ರಣಿ ಪೇಳ್ವುದೆನಗೆ ಬುದ್ಧಿಯ ಮುದದಿಂ

ವಚನ:—

ಎಂದಾ ರಮಣಿಯೊಡನೆ ರಮಣನೇನೆನ್ನುತಿರ್ದನು.—

ಚಂಪಕಮಾಲಾ ವೃತ್ತ:—

ಭುವನಜಗಂಧಿಕೇಳ್ ನಿನಗೆ ಬೋಧಿಪೆ ಲಾಲಿಸು ಸಂತಸಂಗದಿಂ
ಧ್ರುವಮೊದಲಾದ ಭಕ್ತರು ಮಧುದ್ವಿಷನಂ ನೆರೆನಂಬಿಯಾಚಿಸಲ್
ಸವೆಯದ ಮೋಕ್ಷಭಾಗ್ಯವನು ಸಂಭ್ರಮದಿಂ ದಯೆಗೈಯಲಿಲ್ಲವೇ
ಪ್ರವಿಮಲನಾದ ಮಾಧವ ಕೃಪಾನಿಧಿಯಲ್ಲವೆ ಪಲ್ಲವಾಧರೀ

ವಚನ:—

ಎಂದ ನಾಥನೊಡನೆ ನಾರೀಮಣಿಯೇನೆನ್ನುತಿರ್ದಳು.—

ಕಂದ:—

ಧ್ರುವಮುಖ್ಯರಿಹದ ಸೌಖ್ಯವ
ಸವೆಯದಲನುಭವಿಸಿ ಬಳಿಕ ಪರಸೌಖ್ಯಗಳಂ
ಪ್ರವಿಮಲದಿ ಪಡೆದುದುಂಟೆಂ
ವಿವರಿಪುದೆನಗವರಪರಿಯ ವಿಪ್ರಕುಲೇಂದ್ರಾ

ವಚನ:—

ಇಂತು ಕೇಳಿದ ಸಾಧ್ವೀಮಣಿಗೆ ವಿಪ್ರೋತ್ತಮನೇನೆಂದು ಪೇಳುತಿರ್ದನು:—

ಕಂದ:—

ಅಹಿರಾಜವೇಣಿ ಕೇಳವ
ರಿಹಲೋಕದಿ ಸೌಖ್ಯಪಡೆದು ತದನಂತರದೊಳ್
ಸಹಜಾನಂದ ಪದಂಗಳ
ವಿಹಿತದೊಳೈದಿದರು ನಿತ್ಯವಿದು ವಿಧುವದನೇ

ವಚನ:—

ಇಂತೆಂದಾಪ್ರಾಣಕಾಂತನೊಳು ಕಾಂತೆಯೇನೆನ್ನುತಿರ್ದಳು:—

ಪದ　ರಾಗ　ಕೇತಾರಗೌಳ

ಪ್ರಾಣರಮಣನೆ ಭಳಿರೆ ನಿಪುಣನೆ
ಜಾಣರ ಜಾಣ ಪ್ರವೀಣ　　ಪ.

ಧರಣಿಯೊಳುದಿಸಿ ಹರಿಯನೆ ಭಜಿಸಿ
ನರರಿಹ ಲೋಕದಿ ಸೌಖ್ಯದಿ
ಇರುತಿಹರೆಂದು ಕರುಣಿಸಿದಿಂದು
ಹರಿಯದ ಬಡತನವೇನೈ ೧

ವನಜನಯನನ ವನನಿಧಿ ಶಯನನ
ಅನುದಿನ ಭಜಿಪೆವು ನಾವು
ಇನಿತಿರಲೇನು ಇಹಫಲವೇನು
ಮನದಲಿ ಯೋಚಿಸಿ ನೋಡೈ ೨

ಕ್ಷಿತಿಯೊಳು ಜನಿಸಿ ಸಿರಿಯನುಭವಿಸಿ
ಅತಿ ಸೌಭಾಗ್ಯವ ತಾಳಿ
ಸತಿಸುತರಿಂದ ಸತತಾನಂದಾ
ನ್ವಿತರಾಹರು ಇಹದಿಂದ ೩

ಈ ರೀತಿಯಲ್ಲಿ ಇಹಲೋಕದಲ್ಲಿ
ತೋರಿ ಶರೀರವನೀಗಿ
ಸಾರದಯುಕುತಿ ಸಂತತ ಮುಕುತಿ
ಸೂರೆಗೊಳಿಸುವುದು ಲೇಸೈ ೪

ನಿಗಮದ ಪರಿಯು ನೀಸಿದನರಿಯು
ನಗುತಿದೆ ಲೋಕವು ನಮ್ಮ
ಸುಗುಣ ಖಾದ್ರೀಶ ಸುಲಭ ರಮೇಶ
ಜಗದೀಶನ ನೀಬೇಡೈ ೫

ವಚನ:—

ಇಂತೆಂದು ಮತ್ತೋನೆನ್ನುತಿರ್ದಳು:

ರಾಗ ಸೌರಾಷ್ಟ್ರ ಏಕತಾಳ

ಪನ್ನಂಗಶಯನನ ಭಜಿಸಿ ಕಷ್ಟಗಳುಂಟೆ, ಪ್ರಾಣಕಾಂತ ಪ
ಕೈಲಿ-ಬೆಣ್ಣೆಯಿದ್ದವನು ತುಪ್ಪಕೆ ಚಾಲ್ವರಿವುದುಂಟೆ, ಪ್ರಾಣರಾಯ ಅ.

ಗರುಡನ ವೆಗಲೇರಿ ಉರಗನಟ್ಟುಳಿಯುಂಟೆ, ಜೀವಿತೇಶ
ದಿವ್ಯ - ತರಣಿ ಬಳಿಯಲಿದ್ದು ತಮಕಂಜಿದವರುಂಟೆ ಪ್ರಾಣದೊಲ್ಲಭ
ಹರಿಸನ್ನಿಧಿಯಲಿದ್ದು ಕರಿಗಂಜಿದವರುಂಟೆ ಎನ್ನನಾಥ
ಸಿರಿ - ವರನ ಕಿಂಕರಗಿನ್ನಿತರ ಚಿಂತೆಗಳುಂಟೆ ಸದ್ಗುಣಾಕರ ೧

ಪರಶು ಸೋಂಕಿದ ಲೋಹ ಭಂಗಾರವಲ್ಲವೆ ಭವ್ಯಭಾಷ
ಕಲ್ಪ - ತರುವಿನಾಶ್ರಯವಿದ್ದು ದಾರಿದ್ರ್ಯರಾಗೋರೆ ಧರ್ಮಶೀಲಾ
ಅರಿಷಡ್ವರ್ಗವತರಿದು ಅಜ್ಞಾನವೆ ಆರ್ಯಸನ್ನುತ
ಮುರ - ಹರನ ಧ್ಯಾನವ ಮಾಳ್ಪರ್ಗಿತರ ಚಿಂತೆಗಳುಂಟೆ ದುರಿತದೂರ ೨

ಸುತರಿದ್ದು ಬಂಜೆಯೆಂಬರೆ ಪಡೆದವಳನ್ನು ಸುಪ್ರಕಾಶ
ತನ್ನ - ಪತಿಯಿದ್ದು ಮಾಂಗಲ್ಯ ವ್ರತಕೇನು ಸಂದೇಹ ವಿಪ್ರವಂಶಜ
ಅತುಲವಾದಮೃತಪಾನಿಗೆ ಪ್ರಾಣಗತವುಂಟೆ, ಭೂಸುರೋತ್ತಮ
ಹರಿ - ಗತಿಯೆಂದು ನುತಿಪ ಭಕುತರಿಗಾಪದವುಂಟೆ, ಜ್ಞಾನರೂಪ ೩

ಕಡಲದಾಂಟಿದವಗೆ ಕಾಲುವೆ ಘನವುಂಟೆ ಕಪಟದೂರ
ತನ್ನ - ಒಡನುಂಡವನ ಕುಲಗೋತ್ರವು ಹೀನವೆ ಕುಶಲ ಪಾತ್ರ
ಮೃಡನ ಕರುಣವಿದ್ದು ಮೃತ್ಯುವಿಗಳುಕೋರೆ ಮೋಹನಾಂಗ
ನಮ್ಮ - ಬಡತನ ನಿಲುವುದೆ ಹರಿಯ ನಂಬಿರಲಾಗಿ ಕಲುಷ ಭಂಜನ ೪

ಮುಕ್ತನಾದಗೆ ಪುನರಾವರ್ತಿಕೆಯುಂಟೆ ದಿವ್ಯತೇಜ
ಸುವಿ - ರಕ್ತಿಯಿಂದಿರುವಗೆ ಸಂಸಾರ ಘನವುಂಟೆ ಸದ್ಗುಣಾಕರ
ಮುಕ್ತಾಮಣಿಯಾದ ಜಲ ಜಲವಾಹೋದೆ ಜ್ಞಾನರೂಪ
ಹರಿ - ಭಕ್ತರ ಮರೆವನೆ ಶ್ರೀ ಖಾದ್ರಿ ನರಹರಿ ಭಕ್ತಭೂಷ ೫

ವಚನ:—

ಈ ಪ್ರಕಾರದಿಂದ ನುಡಿದು ಕಾಂತಾಮಣಿ ಯೇನೆನ್ನುತಿರ್ದಳು:—

ರಾಗ ಪುನ್ನಾಗತೋಡಿ ಛಾಪುತಾಳ

ಕಷ್ಟ-ಪಡಲಾರೆನೊ ಪ್ರಾಣೇಶ ನಾ
ಕಷ್ಟಪಡಲಾರೆನೊ ಪ.

ಕಷ್ಟಪಡಲಾರೆ ಎಷ್ಟೆಂದು ಹೇಳಲಿ
ಸೃಷ್ಟಿಗೊಡೆಯ ಶ್ರೀಕೃಷ್ಣನೆ ತಾಬಲ್ಲ ಅ.

ನಾರಾಯಣನ ನಂಬಿ ದಾರಿದ್ರ್ಯ ಬಂತೆಂದು
ದೂರುಮಾಡುವಳಲ್ಲ ಸಾರಿ ಹೋರುವಳಲ್ಲ ೧

ಒಡವೆ ವಸ್ತುಗಳೊಲ್ಲೆ ಬಡತಿಯಾಗಿದ್ದೇನು
ಹುಡುಗರ ನೋಡಿ ಎನ್ನೊಡಲುರಿಯುತ್ತಿದೆ ೨

ಅರಿಸಿನ ಕುಂಕುವಃ ಕರಿಮಣಿ ಬಿಚ್ಚೋಲೆ
ಕೊರಳ ಮಂಗಳ ಸೂತ್ರಾಭರಣವಿದ್ದರೆ ನಾಕು ೩

ಎಡೆಯ ಕೈಯೊಳಗಾಂತು ಷಡುರಸಾನ್ನವನುಣ
ಬಡಿಸೆಂದ ಬಾಲಕರೊಡಲು ದೊರಕದಿರೆ ೪

ಉಪ್ಪು ಉಪ್ಪಿನಕಾಯಿ ಹಪ್ಪಳಸಂಡಿಗೆ
ತುಪ್ಪಸಕ್ಕರೆ ಜೇನುತುಪ್ಪವ ಬಯುಸೋರು ೫

ಕಜ್ಜಾಯವತಿರಸ ಸಜ್ಜಿಗೆ ಹೋಳಿಗೆ
ಮಜ್ಜಿಗೆ ನೀಡೆಂದು ಲಜ್ಜೆಗಳೆವುತಿರೆ ೬

ಹೂರಣ ಕಡಬು ಎಣ್ಣೊರಿಗೆ ಮಂಡಿಗೆ
ಆರೋಗಣೆಗೆ ಬೇಗ ತಾರೆಂದಳುತಲಿರೆ ೭

ಪಾಯಸ ಕಲಸನ್ನ ತೋಯುಶಾಕಂಗಳು
ಬಾಯಿ ಬಯುಸುತ್ತಿರೆ ತಾಯೆ ತಾಯೆಂಬರು ೮

ಟೊಪ್ಪಿಗೆ ಮುಂಡಾಸು ದುಪ್ಪಟು ಕಿರಿಧೋತ್ರ
ತಪ್ಪದೆ ಉಡಿಸೆಂದು ಅಪ್ಪಿಕೊಂಡಳುತಾರೆ ೯

ಹೊನ್ನುಂಗುರುಡುದಾರ ರನ್ನದ ಬಾವಲಿ
ಚೆನ್ನಾಗಿ ಧರಿಸೆಂದು ಎನ್ನ ಕೇಳುತ್ತಾರೆ ೧೦

ಚೆಂಡು ಬುಗುರಿ ಗೋಲಿ ಗುಂಡುಗಜ್ಜುಗ ಚಿಳ್ಳೆ
ಕೊಂಡು ಕೊಡೆಂದೆನ್ನ ಜಂಡಲೆವುತಲಿರೆ ೧೧

ಇಂತೆಂದು ಕಾಡುವ ಸಂತತಿಯನು ನೋಡಿ
ಸಂತೈಸುವುದು ಬಹಳ ಚಿಂತೆಯಾಗುತಲಿದೆ ೧೨

ಮಾನ್ಯ ಸಾನ್ಯಗಳಿಲ್ಲ ಧಾನ್ಯ ಸಂಗ್ರಹವಿಲ್ಲ
ದೈನ್ಯವೃತ್ತಿಯೊಳಾಗ ದ್ಧನ್ಯಕಾಲಕ್ಷೇಪ ೧೩

ಇಕ್ಕೇನೆ ಎರದೇನೆ ಚಿಕ್ಕವರಿಗೆ ನಾನು
ರಕ್ಕಸಾಂತಕ ಕೃಷ್ಣ ಮಕ್ಕಳೇತಕೆ ಕೊಟ್ಟ ೧೪

ಶ್ರೀರಮಣನು ಸುಕುಮಾರರ ಕೊಟ್ಟಂತೆ
ಸಾರಸಾಮ್ರಾಜ್ಯವ ನೋರಂತೆ ಕೊಡದ್ಹೋದ ೧೫

ತನಯರಿಗಾಗಿ ನಾ ಧನವನಪೇಕ್ಷಿಪೆ
ಎನಗಿಲ್ಲಧನದಾಸೆ ಮನವಚನಾಂಗದಿ ೧೬

ಮಾರನ ಪೋಲ್ವ ಕುಮಾರಕರನು ದುಷ್ಟ
ದಾರಿದ್ರ್ಯವೀಪರಿ ಗಾರುಮಾಡುತಲಿರೆ ೧೭

ಸಾರರಹಿತ ಸಂಸಾರದಟ್ಟುಳಿ ಎನ್ನ
ವೈರಿಗಳಿಗೂ ಬೇಡ ಧಾರುಣಿ ತಳದಿ ೧೮

ಏಸೆಂದು ಬಣ್ಣಿಪೆನೀಸದ ಸಂಸಾರ
ವಾಸುಕಿಶಯನ ಖಾದ್ರೀಶನೆಬಲ್ಲ ೧೯

ತ್ರಿಪದಿ:—

ತಕ್ಕಭಾಗ್ಯವ ಕೊಡದೆ ಬಡತಿಗೆ
ಮಕ್ಕಳನು ಪಾಲಿಸಿದ ದೇವರ
ನಕ್ಕುಬೈದರೆ ಪಾಪಬಹುದು ನರಕವಹುದು ೧

ಭಾಗ್ಯವುಳ್ಳವರಿಂಗೆ ಇಲ್ಲವು
ಬಾಲಕರು ಸಂತಾನವುಳ್ಳರೆ
ಭಾಗ್ಯವಿಲ್ಲದ ಪರಿಯ ಬ್ರಹ್ಮನು ಬರೆಯುಬಹುದೆ ೨

ಬಾಲರಿಲ್ಲದ ಭಾಗ್ಯವ್ಯಾತಕೆ
ಭಾಗ್ಯವಿಲ್ಲದ ಬಾಲರ‍್ಯಾತಕೆ
ಬಾಲರಿಲ್ಲದೆ ಬಂಜೆಯಾದರೆ ಬಹಳಲೇಸು ೩

ಪೇಳುತಿರುವರಪುತ್ರರಿಗೆ ಗತಿ
ಇಲ್ಲವೆಂದು ಸಮಸ್ತ ಶಾಸ್ತ್ರದಿ
ಕೇಳು ಸಂಸಾರದಲಿ ಕಷ್ಟವ ಬೀಳಲಾರೆ ೪

ಧರ್ಮಸಂಕಟಕೇನು ಮಾಡಲಿ
ಎಮ್ಮ ತನಯರನೆಂತು ಸಲಹಲಿ
ನಿರ್ಮಲಾಂತಃಕರಣವಾಗಲಿ ನೀತಿವಿದನೆ ೫

ವಚನ:—

ಇಂತು ನುಡಿವ ಕಾಂತೆಯಂ ಸಂತವಿಟ್ಟು ಕಾಂತನೇನೆನ್ನುತಿರ್ದನು:-

ರಾಗ ಮೋಹನ ಝುಂಪೆತಾಳ

ಯಾಕೆ ಚಿಂತಿಸಿ ಬಳಲಿ ಬಾಯಾರಿ ಬಸವಳಿವೆ
ಯಾಕೆ ಕಂಗೆಡುವೆ ಸತಿಯೆ ಪ.

ಪ್ರಾಕುಜನ್ಮದಿ ನಾವು ಪಡೆದುದಲ್ಲದಲೆ ವಿ
ವೇಕವೇನಾಯ್ತು ಮರುಳೆ ತರಳೆ ಅ.

ಬಟ್ಟಕುಚದಬಲೆ ಪೂರ್ವಜನ್ಮದಿ ನಾವು
ಬಹಳ ಧನಧಾನ್ಯಗಳನು
ಕೊಟ್ಟುದಿಲ್ಲದರಿಂದ ಈ ಜನ್ಮದಲಿ ನಮಗೆ
ಕೊಡಲಿಲ್ಲ ಪರಮಾತ್ಮನು
ಕಟ್ಟಳೆಯು ವಿಧಿಬರೆದ ಬರಹವನು ಮೀರುವರೆ
ಕಲ್ಪಶತವಾದರೇನು
ಹುಟ್ಟ ಪಡೆಯಲಿಲ್ಲ ಹುಸಿಯಲ್ಲವೀಸೊಲ್ಲು
ಕೊಟ್ಟರಿಲ್ಲದೆ ಪೋಪುದೆ ಮುಗುದೆ ೧

ತನುವು ಶಾಶ್ವತವಲ್ಲ ಧನಧಾನ್ಯ ಸತಿಸುತರು
ತನುವ ಸಂಗಡಬಾರರು
ಕ್ಷಣಭಂಗುರದ ತೆರನು ಸಂಸಾರ ನಿಜವಲ್ಲ
ಕನಸಿನಂದದಿ ತೋರ್ಪುದು
ವನಿತೆ ನೀನಾರು ನಾನಾರು ಮಕ್ಕಳದಾರು
ವಾತ್ಸಲ್ಯ ತೋರುತಿಹುದು
ವನಜಾಕ್ಷ ಸರ್ವರನು ಪೋಷಿಪನು ತೋಷಿಸುವ
ತನಯರಿಗೆ ನೀನೊಡೆಯಳೇ ಚಪಲೆ ೨

ಬಸುರೊಳಗೆ ಈ ನಿನ್ನ ಶಿಶುವಿರಲು ಪಾಲ್ಬೆಣ್ಣೆ
ಯೊಸೆದು ರಕ್ಷಿಸುತಿರ್ದೆಯ
ವಸುಧೆಯೊಳಗೆಂತು ಬಾಳ್ದಪರೆಂದು ಹಂಬಲಿಸಿ
ನಸಿದು ಕುಸಿಯುತಲಿರ್ದೆಯ
ಹಸನಾಯ್ತು ತಿಳಿತಿಳಿದು ಅಜ್ಞಾನದೊಳು ಮುಳುಗಿ
ಆಲಸ್ಯಗೊಳುತಿರ್ದೆಯ
ವಸುದೇವಸುತ ಖಾದ್ರಿ ನಾರಸಿಂಹನು ನಿನ್ನ
ಶಿಶುಗಳನು ಪೊರೆವ ಕಾಣೆ ಜಾಣೆ ೩

ದ್ವಿಪದಿ:—

ಪ್ರಾಣನಾಯಕಿ ಕೇಳು ಪಂಕಜಗಂಧಿ
ಏಣಲೋಚನೆ ಸರ್ವಜಾಣೆ ಬಿನ್ನಾಣೆ ೧

ಪೂರ್ವಜನ್ಮದ ಪುಣ್ಯ ಪುಂಜಂಗಳಿಂದ
ಉರ್ವೀಸುರತ್ವದಿಂದುದಿಸಿ ನಾವೀಗ ೨

ರಮಣಿ ಕಾಮಾಸಕ್ತರಾಗಿ ಶ್ರೀಹರಿಯ
ಮಮತೆಯಿಂಭಜಿಸಿ ಸಾಮ್ರಾಜ್ಯವಿಭವದಲಿ ೩

ಸಂಸಾರದೊಳಗಿದ್ದು ಸಾರ್ವಕಾಲದೊಳು
ಕಂಸಾರಿಯಂಮರೆದು ಕಾಯುವನ್ನಳಿದು ೪

ನರಕಯಾತನೆಯಿಂದ ನವೆವುದಕ್ಕಿಂತ
ಹರಿಯನಿಷ್ಕಾಮದಿಂದರ್ಚಿಸಿ ಬಡವ ೫
ರಾಗಿ ಶ್ರೀಹರಿಯ ಕಲ್ಯಾಣ ಗುಣಗಣವ
ಯೋಗಮಾರ್ಗದಿ ತಿಳಿದು ಉಚಿತ ವೃತ್ತಿಯಲಿ ೬

ಜಲಬುದ್ಬುದೋಪಾದಿ ಚಲನ ದೇಹವನು
ಕಳೆದು ಪುನರ್ಜನ್ಮಗಳು ಇಲ್ಲದಿರ್ಪ ೭
ವೈಕುಂಠದೋಳ್ನಿಂದು ವನಜಲೋಚನನ
ಸಾಕಾರಮಂತಳೆದು ಸಂತತಾನಂದ ೮

ಸಾಮ್ರಾಜ್ಯದಿಂದಿರುವ ಸೌಖ್ಯವಂಬಿಟ್ಟು
ತಾಮ್ರಾಧರೆಯೆ ನಾವು ದಾರಿದ್ರ್ಯಕಳುಕಿ ೯
ಸ್ವಲ್ಪಸೌಖ್ಯವ ಬಯಸಿ ಸದ್ಭಕ್ತಲೋಕ
ಕಲ್ಪವೃಕ್ಷನ ಕರುಣಕಾಂಬೆವಿನ್ನೆಂತೊ ೧೦

ಭಾಗ್ಯದಿಂದಲಿ ಎಮ್ಮ ಪ್ರಬಲತರಮುಕ್ತಿ
ಯೋಗ್ಯಕೂಣೆಯಮಕ್ಕು ಉರುಪುಣ್ಯಸಾಧ್ವಿ ೧೧
ಯಸ್ಯಾನುಗ್ರಹಮಿಚ್ಛಾಮಿ ತಸ್ಯ
ವಿತ್ತಂ ಹರಾಮ್ಯಹಮೆಂದು ಮುದದಿ ೧೨

ಯಸ್ಯ-ನಿಗ್ರಹಮಿಚ್ಛಾಮಿ ತಸ್ಯ
ವಿತ್ತಂದದಾಮ್ಯಹಮೆಂದು ನಿಜದಿ ೧೩
ವನಜಾಕ್ಷನಾದ ಭಗವದ್ವಾಕ್ಯವಿರಲು
ವನಿತೆ ಸುಮ್ಮನೆ ನೀನು ವಾದಿಸಲ್ ಬಹುದೆ ೧೪

ಎಂದು ಮೌನವತಾಳೆ ಇಂದು ಬಿಂಬಾಸ್ಯೆ
ಮಂದಹಾಸದಿ ಪತಿಯಮರ್ಮವಂ ತಿಳಿದು ೧೫
ತಲೆದೂಗಿ ಮೆಚ್ಚಿ ಸಂತಸಬಟ್ಟುಮನದಿ
ಜಲಜಾಕ್ಷಿಸುತ ಚತುಷ್ಟಯರ ಕಷ್ಟವನು ೧೬

ನೆನೆನೆನೆದು ಚಿಂತಿಸುತ ಇನನಂಘ್ರಿಗಳಿಗೆ
ವಿನಯದಿಂದೆರಗಿ ಬಿನ್ನೈಸಿದಳಾಗ ೧೭

ಸೀಸಪದ್ಯ:—

ಪ್ರಾಣನಾಯಕ ವಿಷ್ಣು ಭಕ್ತಾಗ್ರಗಣ್ಯ
ತತ್ವಾರ್ಥಮಂ ಎನಗೆ ಸಾದರದೊಳೀಗ
ಬೋಧಿಸಲ್ ಸಂದೇಹ ಪೋಪುದಾನಂದಾತ್ಮ
ಳಾದೆ: ನಿಮ್ಮಯ ಸತ್ಕೃಪೋದಯದೊಳು
ಸಂಸಾರಶರಧಿಯೋಳ್ ಸಾಮ್ರಾಜ್ಯಮೆಂತೆಂಬ
ಸುಳಿಗಳೋಳ್ ಸಿಲುಕಿ ಪುತ್ರಾದಿ ಘೋರ
ಜಲಚರಂಗಳ ಭಾಧೆಗೊಳಗಾಗೆ ಪರಲೋಕ
ಭಾಗ್ಯಮೆಂತಕ್ಕು ವೈರಾಗ್ಯಭಾಗ್ಯ
ಯೋಗ್ಯರಾಹುದು ಕಡುಲೇಸು ಉಚಿತದಿಂದ
ಪುತ್ರಮಿತ್ರಕಳತ್ರಾದಿಗಾತ್ರಮೆಂಬ
ದೇಹಸಂಬಂಧಬಾಧ್ಯದಿ ಪ್ರಾಣದೊಡನೆ
ಸತ್ಯ ನಿಮ್ಮಯಭಾಷೆಗಳ್ ಸತ್ಯಸಂಧಾ

ಯಾಲಪದ:—

ಕಾಳು ಸಂಸಾರದ ಬಾಳು ಗಾಳಿಗಿಟ್ಟ ದೀಪದಂತೆ
ಪಾಳು ತೋಟಕ್ಕಿಟ್ಟ ನೀರಂತೆ, ಪ್ರಾಣದೊಲ್ಲಭ.
ಲಾಲಿಸಿನ್ನೊಂದು ಬಿನ್ನಪವ ೧

ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ
ಧರೆಯೊಳೆಂತೆಂದು ಪೇಳುವ, ಶಾಸ್ತ್ರಾರ್ಥವೆನಗೆ
ಕರುಣಿಸು ಕಾರುಣ್ಯಸಿಂಧು ೨

ನ-ದೇವಾದಂಡಮಾದಾಯ ರಕ್ಷಂತಿ ಪಶುಪಾಲವತ್
ಮೇದಿನಿಯೊಳೆಂದು ಪೇಳುವ, ಗ್ರಂಥಾರ್ಥವನ್ನು
ಬೋಧಿಸೆನಗೆ ಪುಣ್ಯಪುರುಷನೆ ೩

ಆತ್ಮಾವೈಪುತ್ರನಾಮಾಸಿ ಎಂಬ ವೇದಾರ್ಥವನ್ನು
ಸ್ವಾತ್ಮನಿಗೆ ತಿಳಿವ ಪರಿಯನು ಎನಗೆ ಪರ
ಮಾತ್ಮನಾದ ರಮಣ ಪಾಲಿಸೊ ೪

ದಾಸಿ ನಾನು ದಾಸಜನರ ಪೋಷಿಪಜೀವೇಶ ನೀನು
ಬೇಸರಗೊಳ್ಳದೆ ಪೇಳೆಂದು. ಕಾಂತನಡಿಗ
ಳಾ ಸರೋಜನೇತ್ರೆ ಪಿಡಿದಳು ೫

ವಚನ. —

ಇಂತು ಪ್ರಶ್ನೆಯಂ ಮಾಡಿದ ಪತ್ನಿಯೊಡನೆ ಪತಿಯೇನೆನ್ನುತಿರ್ದನು.

ರಾಗ ಶಂಕರಾಭರಣ ಅಟತಾಳ

ಕೇಳೆನ್ನ ಪ್ರಾಣಕಾಂತೆ, ಸುಶೀಲೆ ನೀ
ಕೇಳೆನ್ನ ಪ್ರಾಣಕಾಂತೆ ಪ.

ಕೇಳು ಪ್ರಾಣಕಾಂತೆ ಕಲಿತೆ ಸದ್ಗುಣ ಶಾಂತೆ
ಪೇಳುವೆ ಶುಭವಂತೆ ಲಾಲಿಸು ತಿಳಿವಂತೆ ಅ.

ನರಜನ್ಮವಪರೂಪ ಧರೆಯೊಳಗದರಿಂದ
ಸ್ಥಿರವಿಲ್ಲಪೀದೇಹ ತೆರಳೆ ಪಾಪಪುಣ್ಯ
ವೆರಡು ಸಂಗಡ ಬಾಹೋದರಿತು ಸತ್ಪುರುಷರು
ಪರಉಪಕಾರವ ಮರೆಯದೆ ಮಾಳ್ಪರು
ಪರಉಪಕಾರದಿಂದರಸಿನೋಡಲು ಪುಣ್ಯ
ಹಿರಿದಿಲ್ಲ ಪುಣ್ಯಕೋಸ್ಕರ ಉಪಕಾರವ
ಚರಿಸುವುದುಚಿತವು
ಪರಪೀಡನೆ ಮಾಳ್ಪುದೆ-ಮಹಾಪಾಪ
ನರಕಸಾಧನವಪ್ಪುದೆ-ಎಂದನುದಿನ
ಹಿರಯರಾಡುತಲಿಪ್ಪುದೆ- ಶಾಸ್ತ್ರಾರ್ಥವು
ಅರಸಿ ನೀನಿದ ತಿಳಿದಿರಿಸು ಸನ್ಮನದಲಿ ೧

ಜಲಜಾಕ್ಷಿ ಸಕಲರ ಸಲಹುವ ಪರಬ್ರಹ್ಮ
ನೊಲಿದು ಗೋಪಾಲಕ ಬಲು ದಂಡಧರನಾಗಿ
ಬಳಲುತ ಮನೆ ಮನೆಗಳ ಪೊಕ್ಕು ಪಶುಗಳ
ಪೊಳಲ ಬಾಹ್ಯಕೆ ಕೊಂಡು ಕೊಳಲೂದಿ ತೃಣಜಲ
ಗಳಿಗೊಯ್ದು ರಕ್ಷಿಪವೊಲುತಾನೆ ಹರಿಬಂದು
ಅಲಸಿ ಜೀವರಾಶಿಗಳನು ಪೋಷಿಪುದಿಲ್ಲ
ಸಲಹುವ ಸುಲಭದಿಂ
ದಲಿ ಓರ್ವರನೋರ್ವರ-ಸ್ವಾಧೀನದಿಂ
ಬೆಳೆಸುವನವರವರ-ಯೋಗ್ಯತೆ ಪರಿ
ಯಲಿ ಈ ಸಕಲಜೀವರ-ಕಾಪಾಡುವ
ನೆಲೆಯಿದು ಗ್ರಂಥಾರ್ಥ ಲಲನೆ ಸತ್ಯವೀಗ ೨

ಪ್ರೀತಿಯಿಂ ಲಾಲಿಸೀಮಾತ ಮಾನಿನಿ ಅಂತೆ
ಸ-ತಿಯುದರದೊಳು ಜಾತನಾಗುವ ಪುತ್ರ
ನೇತನೆಂದೆನಿಸಿ ಜೀವಾತುಮನುದಿಸುವ
ಸ್ವಾತಿಯುದಕ ಶುಕ್ತಿ ಪಾತವಾದುದರಿಂದ
ಜಾತಿ ಮುತ್ತಾದಂತೆ ರೇತೋರೂಪದಿ ತನ್ನ
ಪ್ರೀತೆಯುದರದಿ ನಿಂತೀತೆರದಲಿ ಸುತ
ನೇತನಾಗುವಂಥ
ರೀತಿಯಿದೆಂಬುವರು-ಖಾದ್ರೀಪುರ
ನಾಥನ ಬಲ್ಲವರು-ಮರೆಯದಿರು
ನೀ ತಿಳಿದಿರುತಲಿರು-ಮರ್ಮವಿದೆಂದು
ಆತ್ಮಾವೈಪುತ್ರನಾಮಾಸಿ ಎಂಬರ್ಥವ ೩

ವಚನ:—

ಇಂತೆಂದು ನುಡಿದ ಪುರುಷನೊಡನೆ ತರುಣಿಯೀನೆನ್ನುತಿರ್ದಳು.—

ದ್ವಿಪದಿ:—

ಓ ಸತ್ಯಸಂಕಲ್ಪ ಓ ನಿರ್ವಿಕಲ್ಪ
ಓ ಸತ್ಯಭಾಷಣ ಓ ದೀನಶರಣ ೧

ಬಾಲೆ ನಾ ಕೇಳಿದ ಪ್ರಶ್ನೆಗುತ್ತರವ
ಪೇಳಿದೆ ಲೇಸಾಗಿ ಪ್ರಿಯದೊಳಿನ್ನೊಡನೆ ೨

ಪರರಿಗುಪಕಾರವಂ ಭಾವಶುದ್ಧಿಯಲಿ
ವಿರಚಿಸಲ್ ಬಹು ಪುಣ್ಯಮೆಂದು ಸಾದರದಿ ೩

ಪರರಲ್ಲವೇ ಪುತ್ರಭಾವದರ್ಭಕರು
ಕರುಣದಿಂದುಪಕಾರವಂ ಮಾಡಿ ಸಲಹೆ ೪

ಮಹಾಪುಣ್ಯ ಸಂಘಟನೆಯುಕ್ಕುದೆಲೆನಾಥ
ಮಹಾಪುರುಷ ಕೇಳಿನ್ನೊಂದು ನುಡಿಯ ೫

ಓರ್ವರ ಸ್ವಾಧೀನ ವೋರ್ವರಂ ಮಾಡಿ
ಸರ್ವರಂ ಪೋಷಿಪ ಸ್ವಾಮಿ ಶ್ರೀಕೃಷ್ಣ ೬

ನೆಂದು ಬುದ್ಧಿಯ ಪೇಳ್ದ ನೀತಿಕೋವಿದನೆ
ಇಂದಿರಾರಮಣ ನೀ ಕಂದರಂ ನಿನ್ನ ೭

ಸ್ವಾಧೀನವಂಮಾಡಿ ಸಂರಕ್ಷಣೆಯನ್ನು
ವೋದದಿಂ ಮಾಡೆಂಬುದಾಯುಕ್ತ ಗ್ರಂಥಾರ್ಥ ೮

ತಾನೊಂದು ರೂಪಾಗಿ ತರುಣಿ ಗರ್ಭದಲಿ
ತಾನೆಪುಟ್ಟುವನೆಂಬ ಧರ್ಮದ-ನುಡಿಯು ೯

ನಾಡಿದಮೇಲೆ ನೀನಾದಂಥ ಸುತರ
ನೋಡಿ ರಕ್ಷಿಸಬೇಕನುಗ್ರಹಂಗೈದು ೧೦

ಆಡಿತಪ್ಪುವರೆ ವೇದಾಂತ ವೇದಿಗಳು
ಕಾಡುವಳೆಂದು ಕರಿಣಾತ್ಮಳೆಂದು ೧೧

ದಯುವ ಬಿಡದಿರು ನಿನ್ನ ತನಯರಮೇಲೆ
ನಯಗುಣ ಪರಿಪೂರ್ಣನಲ್ಲವೇ ನಾಥ ೧೨

ಎಂದು ಸಾಧ್ವೀರತ್ನವಾ ನಾಥನ ಚರಣ
ದ್ವಂದ್ವದೋೞ್ ಪೈಯಿಕ್ಕಿ ತಾನೆಂದಳಿಂತು ೧೩

ರಾಗ ಶಂಕರಾಭರಣ ಅಟತಾಳ

ಸೂರ್ಯಚಂದ್ರರು ಲೋಕಕುಪಕಾರಾರ್ಥವಾಗಿ ನಿತ್ಯ ಸ್ವ
ಕಾರ್ಯಮಿಲ್ಲದೆ ಚರಿಸದಿರರೇ ಗೌರವದೊಳು ೧

ಸಕಲ ನದಿಗಳು ಸ್ವಾದುಮಯವಹ ಜಲಗಳಿಂದಲಾವಗಂ
ನಿಖಿಲ ದೆಸೆಗಳು ಸಂಚರಿಸವೇ ಪರ ಉಪ ಕೃತಿಯಲಿ ೨

ಭೂರುಹಂಗಳು ಧರೆಯೊಳಗೆ ಫಲಪುಷ್ಪದಿಂದ ಪರರಿಗೆ
ದಾರಿಯೊಳು ಶ್ರಮಗಳನು ಕಳೆಯವೆ ಧರ್ಮವೆಣಿಸಿ ೩

ಚಂದನವು ತನ್ನಯ ಶರೀರವ ಕ್ಷಯವಗೈದು ಓರ್ವರ
ಗಂಧದಿಂದಲಿ ಸಂತವಿಡದೆ ಕರುಣವೆರೆಸಿ ೪

ಪುರುಷಕೇಳ್ ಬೀಸಣಿಗೆ ಕರದೊಳು ತಿರುಗಿ ಬಳಲಿ ಶ್ರಮಜಲ
ಪರಿಹರಂಗಳಮಾಡದೆ ದಯಭರಿತದಿಂದ ೫

ಹರಿಯು ವೈಕುಂಠದಲಿ ಸಿರಿಸಹ ಇರದೆ ನಾನಾ ರೂಪವ
ಧರಿಸಿ ಸುರಗೋದ್ವಿಜರ ಸಲಹನೆ ಕರುಣವೆರೆಸಿ ೬

ಸುಕೃತವನು ಚಿತ್ತದೊಳಗೆಣಿಸಿ ಸುತರ ಸಲಹಿ ಇಹಪರ
ಸುಖವ ಪಡೆವುದು ಶಾಸ್ತ್ರಸಮ್ಮತ ಶುಭಚರಿತ್ರ ೭

ವಚನ:—

ಇಂತೆಂದು ವೇದಶಾಸ್ತ್ರ ಸಮ್ಮತದಿಂದ ಮಾರುತ್ತರಮಂ ತೋರದಂತೆ ವಿನಯದಿಂ ನುಡಿದು ಸಾಷ್ಟಾಂಗ ದಂಡಪ್ರಣಾಮಂಗಳಂ ಮಾಡಿ ಅಡಿಗಳಂ ಪಿಡಿದು ಗಡಗಡನೆ ನಡಗುತ್ತ ಬಿಡದಿರುವ ಬಡನಡುವಿನ ಕಡು ಚೆಲ್ವೆಯಂ ಕಂಡು ತಲೆದಡವಿ ಪಿಡಿದೆತ್ತಿ ಮುಡಿಯಂ ನ್ಯಾವರಿಸಿ ಹುಡುಗರಂ ಕರೆಸಿ ಬಿಗಿದಪ್ಪಿ ಮೂರ್ಧಾಘ್ರಾಣವಂಮಾಡಿ ಕುಡುತೆಗಂಗಳ ಮಡದಿಯೊಡನೆ ಪೊಡವೀಸುರನೇನೆಂದು ನುಡಿಯುತಿರ್ದನೆಂತೆನೆ.—

ಕುರುಕುಝುಂಪೆ:—

ಬಾಲೆ ನಿನಗೋಸುಗವು ನಾನು, ಸುತರ
ಪಾಲಿಸಲು ಮನವ ಸೋಲುವೆನು ೧

ಯಾರನ್ನ ಪೋಗಿ ಯಾಚಿಸಲಿ, ಸ್ವಸ್ತಿ
ಶ್ರೀರಸ್ತು ಎಂದು ವಾಚಿಸಲಿ ೨

ಮಂತ್ರಾಕ್ಷತೆಯನೆಂತು ಕೊಡಲಿ, ವೇದ
ಮಂತ್ರಗಳನೆಂತು ವೆಚ್ಚಿಸಲಿ ೩

ದೇಹಿಯೆಂಬುವುದು ಬಹು ಕಷ್ಟ, ನಾಸ್ತಿ
ನೀಹೋಗೆಂಬುವನು ತಾ ಭ್ರಷ್ಟ ೪

ನೃಪನೊಡವೆಯನ್ಯಾಯದರ್ಥ, ತಂದ
ಶ್ವಪಚವಿಪ್ರನ ಜನ್ಮವ್ಯರ್ಥ ೫

ಮನೆಯಗಲಿ ಪೋಗಿ ನಾನರಿಯೆ, ಅನ್ಯ
ಜನರ ಕೇಳ್ದರಿಯೆ ಶ್ರೀಹರಿಯೆ ೬

ಸಂಸಾರಿಕನ ಜನ್ಮ ಸುಡಲಿ, ಶ್ರೀ
ಕಂಸಾರಿ ನಿನ್ನ ದಯವಿರಲಿ ೭

ವಚನ—

ಇಂತೆಂದು ಯಾಚಿಸುವುದಕ್ಕೆ ನಾಚಿಸಿ ಯೋಚಿಸುವ ಭೂಸುರೇಂದ್ರನೋಳ್ ಭಾಸಮಾನಳಾದ ಆ ಸರೋಜಮುಖಿ ಯೇನೆನ್ನುತಿರ್ದಳು.—

ರಾಗ ಆನಂದಭೈರವಿ ಝಂಪೆತಾಳ

ಧಾತ್ರೀ ಸುರೇಂದ್ರ ಈ ಧಾತ್ರಿಯೊಳು ನಿನಗಾಪ್ತ
ಮಿತ್ರರಿಲ್ಲವೆ ಶುಭಚರಿತ್ರ ಸುಪವಿತ್ರ ೧

ದ್ವಿಜರೊಳಾಗಲಿ ಧರಾಭುಜರೊಳಾಗಲಿ ನಿನಗೆ
ನಿಜಸಖರಿಲ್ಲವೆ ದ್ವಿಜಕುಲೋತ್ತಂಸ ೨

ಮಿತ್ರರಾಪತ್ತಿನೊಳು ಪುತ್ರರನು ಅಂತ್ಯದೊಳು
ಉತ್ತಮರು ಬಯಸರೇ ಚಿತ್ತದೊಲ್ಲಭನೆ ೩

ಅಪರಿಚಿತರಾಗಿರುವ ನೃಪಮುಖ್ಯರನು ಬೇಡೆ
ಅಪಚಾರವಹುದಿಷ್ಟು ಉಪಚಾರಬಹುದೆ ೪

ಇನಿಯ ನಿನ್ನಯ ದಿವ್ಯ ಮನದೊಳಗೆ ನಿಶ್ಚೈಸು
ಅನುಕೂಲನಾದ ಸಖನನು ಮನೋರಮಣ ೨೪

ವಚನ:—

ಇಂತೆಂದ ಇಂದುಮುಖಿಯೊಡನೆ ಸಾನಂದದಿಂದ ಸುಧಾಮನೇನೆನ್ನುತಿರ್ದನು.—

ಯಾಲಪದ:—

ಸಂಗದಿಂದರಿಷಡ್ವರ್ಗ ಸಂಗವಹುದೆಂದು ನಾನಿ
ಸ್ಸಂಗದೊಳಗಿರುತಿಹೆನು, ಬಾಲತ್ವದಿಂದ
ಅಂಗನೆ ಕೇಳೆನ್ನ ಬಗೆಯನು ೧

ದುಷ್ಟಜನರ ಸ್ನೇಹದಿಂದ ಶಿಷ್ಟರ ಸಂಪತ್ತಿಗಳು
ನಷ್ಟವಾಹುದೆಂದು ಶ್ರುತಿಗಳು, ಪೇಳುತ್ತಲಿರೆ
ಕಷ್ಟವೆಂದು ಬಗೆಯದಿರುವೆನು ೨

ಒಂದುಂಟು ನಾ ಬಾಲ್ಯದಲ್ಲಿ ಸಾಂದೀಪನ ಮಂದಿರದಲ್ಲಿ
ಇಂದುವದನೆ ವಿದ್ಯಾಭ್ಯಾಸವ, ಮಾಡುತಲಿ ಗೋ
ವಿಂದನೊಡನೆ ಪರಮ ಸಖ್ಯದಿ ೩

ಸಾಧ್ಯಾಯಿಗಳಾಗಿ ಸಕಲ ವಿದ್ಯಾಭ್ಯಾಸಗಳನು ನಮ್ಮು
ಪಾಧ್ಯರಲ್ಲಿ ಕಲಿವುತಿರ್ದೆವು, ಗ್ರಂಥಾರ್ಥಗಳ
ಭೇದ್ಯವಾದಡರಿದು ಪೇಳ್ವೆವು ೪

ಆಟಪಾಟಂಗಳಿಂದಲಿ ಊಟ ಕೂಟಂಗಳಿಂದಲಿ
ಪಾಟಲಗಂಧಿ ನಾವೀರ್ವರು, ಎಡೆಬಿಡದಲೆ
ಸಾಟಿಯಿಲ್ಲದಿರುತಿರ್ದೆವು ೫

ಉತ್ಪಲಮಾಲಾವೃತ್ತ:—

ಆ ವಸುದೇವಜಾತನುಳಿದನ್ಯರನೋರ್ವರ ಮಿತ್ರರೆಂದು ಸಂ
ಭಾವನೆಗೈದುದಿಲ್ಲ ಬಹುಬಾಲ್ಯದ ಸಖ್ಯನು ಕೃಷ್ಣನೀಜಗ
ಜ್ಜೀವನ ದೇವನಾಗಿರುವನಾತನು ಶುದ್ಧ ದರಿದ್ರನಾಗಿ ನಾ
ನೀವಿಧದಿರ್ಪೆ ಪೂರ್ವದ ಸಖತ್ವರಮಾಧಿಪಗುಂಟೆ ಮಾನಿನೀ

ಕಂದ.—

ಶ್ರೀರಮಣನಾಗಿ ತಾ ಹದಿ
ನಾರು ಸಹಸ್ರಾಂಗನೆಯರ ನಾಯಕನಾಗೀ
ಮೂರು ಜಗದೊಡೆಯನಾಗಿಹ
ನಾರಾಯಣ ಮರೆಯದಿಹನೆ ಸಮ್ಮನು ತರುಣೀ

ವಚನ.—

ಈ ಪ್ರಕಾರದಿಂದ ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣನೊಬ್ಬ ಸಖನಲ್ಲದೆ ಇತರ ಜನಂಗಳ ಮಿತ್ರತ್ವಮೆನಗೆ ಜನ್ಮಾರಭ್ಯಮಾಗಿಲ್ಲವೆಂದು ನುಡಿದಾರಮಣನೊಡನೆ ರಮಣಿಯೇನೆನ್ನುತಿರ್ದಳು —

ರಾಗ ಮಧ್ಯಮಾವತಿ ಝಂಪೆತಾಳ

ಲೇಸನಾಡಿದೆ ಮನೋರಮಣ ಶ್ರೀನಿ ಪ.
ವಾಸನು ಬಾಲ್ಯದ ಸಖನು ಎಂದೆನ್ನೊಡನೆ ಅ.

ಸಾಂದೀಪರಾದ ಗುರುಮಂದಿರದಿ ನೀನು ಗೋ
ವಿಂದನೊಳು ಸಹಾಧ್ಯಾಯಿಯೇ
ಸಂದ ವಿದ್ಯಾಭ್ಯಾಸದಿಂದಿಂದಿರಾಧೀಶ ನೀ
ನೊಂದಾಗಿ ಕಲಿತ ಪರಿಯೇ
ಚೆಂದದಿಂ ಮಿತ್ರತ್ವದಿಂದೊಡನಾಡಿದ ಮು
ಕುಂದನೆಂಬುವುದನರಿಯೆ
ಇಂದು ನೀನುಡಿದೆ ಹೀಗೆಂದು ನಾವೀಸುದಿನ
ಮಂದಭಾಗ್ಯರುಗಳೈಸೇ ಪತಿಯೆ ೧

ಕಾಮಧೇನುವೆ ತನ್ನ ಧಾಮದೊಳಗಿರುತಿರಲು
ತಾಮಸ ದರಿದ್ರನಂತೆ
ವ್ಯೋಮಗಂಗಾತಟಿಯ ಸೀಮೆಯಲಿ ಕೂಪವನು
ಕಾಮಿಪ ತೃಷಾರ್ತನಂತೆ

ಸೋಮಧರನ ಕಟಾಕ್ಷ ಪ್ರೇಮದಿಂದಿರೆ ಮೃತ್ಯು
ಕೈಮಾಡಿ ಪೋಪರಂತೆ
ಕಾಮಪಿತನಾದ ಶ್ರೀ ಸ್ವಾಮಿಯ ಸಖತ್ವಮಿರೆ
ಭ್ರಾಮಕರು ನಾವಾಹರೆ, ಪತಿಯೆ ೨

ತರಳತನದಲಿ ನಿನಗೆ ಸರಿಯಾದ ಸಖನಾಗಿ
ಮರೆಯಲರಿವನೆ ನಿನ್ನನು
ಪರಿದು ಹದಿನಾರು ಸಾಸಿರ ಸತಿಯರೊಡಗೂಡಿ
ಎರಡೇಳು ಲೋಕಗಳನು
ಹಿರಿದಾಗಿ ರಕ್ಷಿಸುವ ಧೊರೆಯಾದ ಖಾದ್ರಿ ನರ
ಹರಿಯು ಮರೆವನೆ ನಮ್ಮನು
ಮರುಗಿ ಮಾಡುವುದೇನು ಅರಿಯದವನೇ ನೀನು
ಹರಿಯ ಪ್ರೇರಣೆಯಿಲ್ಲವೇ, ಪತಿಯೆ ೩

ವಚನ.—

ಇಂತೆಂದು ಮತ್ತೂ ಏನೆನ್ನುತಿರ್ದಳು.—

ಸೀಸಪದ್ಯ.—

ಕಂಸಾದಿ ದನುಜರಿಂ ಕೌರವಾದ್ಯರಸರಿಂ
ಭಾರಕಾರದೆ ಧಾತ್ರಿ ಬ್ರಹ್ಮನೊಡನೆ
ಮೊರೆಯಿಡಲ್ ಚತುರಾಸ್ಯ ಮುಖ್ಯಾಮರರ್ ಪೋಗಿ
ಶರಧಿತಲ್ಪಗೆ ಪೇಳೆ ಕರುಣದಿಂದ
ಸಂತೈಸಿ ಕಳುಹಿ ಆ ಸುಮನಸರೆಲ್ಲರನು
ಭಕ್ತವತ್ಸಲನಾದ ವಾರಿಜಾಕ್ಷ
ವಸುದೇವದೇವಕೀ ವರ ಗರ್ಭಜಲಧಿಯೊಳ್
ಪೂರ್ಣ ಚಂದ್ರೋದಯ ಸ್ಫೂರ್ತಿಯಿಂದುದಿಸಿ
ದುಷ್ಟನಿಗ್ರಹ ಶಿಷ್ಟಪ್ರತಿಷ್ಠೆಗಳನು ಗೈದು
ಭೂಭಾರವಿಚ್ಛೇದಕಾರಿ ಶೌರಿ

ದ್ವಾರಕಿಯಲಿಪ್ಪ ಶ್ರೀಕೃಷ್ಣದೇವ ನಮ್ಮ
ಸಲಹದಿಪ್ಪನೆ ರಮಣ ಸರ್ವಜ್ಞಮೂರ್ತಿ

ವಚನ:—

ಮತ್ತೂ ಆ ಸರ್ವೋತ್ತಮನಾದ ಶ್ರೀಕೃಷ್ಣನಂ ಏನೆಂದು ಕೊಂಡಾಡುತಿರ್ದಳು.—

ಶ್ಲೋಕ —

ಸರಸಿಜದಳನೇತ್ರ ಸನ್ಮುನಿಸ್ತೋತ್ರ ಪಾತ್ರ
ನಿರುಪಮಗುಣಜಾಲ ನಿತ್ಯಕಲ್ಯಾಣ ಶೀಲ
ಪರಮಜಲಧರಾಂಗ ಭಕ್ತಹೃತ್ಪದ್ಮ ಭೃಂಗ
ಭರಿತ ಶುಭಗರಿಷ್ಣ ಪಾಹಿ ಗೋಪಾಲಕೃಷ್ಣ

ರಾಗ ತೋಡಿ ಅಟತಾಳ

ಪೊರೆಯಲಾರನೆ ನಮ್ಮನು-ಶ್ರೀಕೃಷ್ಣದೇವ
ಪೊರೆಯಲಾರನೆ ನಮ್ಮನು ಪ.

ಪೊರೆಯಲಾರನೆ ನಮ್ಮನು ಹರಿಯಾದ ಪರಬ್ರಹ್ಮನು
ನರಗೊಲಿದವನ ತುರಗವ ನಡೆಸಿದ
ಪರಮಪುರುಷ ಪರಿಪೂರ್ಣ ಪರಾತ್ಪರ ಅ.

ಕರಿಮಕರಿಗಾಗಿ ಸಿಲುಕಿ ಸರಸಿಜ ಭವಭವಾದಿ
ಸುರರ ಬೇಡಿ ಬಳಲಿ ಬಳಿಕ ಗರುಡಗಮನ ಕರುಣಿಸೆನಲು
ಸಿರಿಗೆ ಪೇಳದೆ ಬಾರನೆ-ಚಕ್ರದಿಂ ನಕ್ರನ
ಶಿರವ ತರಿಯದಾದನೆ-ಸಾಮಜೇಂದ್ರನ
ದುರಿತ ಕಳೆಯಲಾರನೆ-ಮೊಸಳೆಯ ಗಂ
ಧರುವನ ಮಾಡಿತೋರನೆ-ನೀನರಿಯದವನೆ
ಹರಿಯೆ ಸರ್ವೋತ್ತಮನೆಂಬ ಸುತನ್ನ-ಬಾಧೆಯೊಳಿಟ್ಟು
ಹಿರಣ್ಯಕಶಿಪು ಪೀಡಿಸಲವನ್ನ-ಉರವ ಬಗೆಯನೆ
ನರಸಿಂಹ ರೂಪವ ತಾಳಿಸುವನ್ನ-ಸರಿಂದಪೂಜೆ
ವೆರಸಿ ರಕ್ಷಿಸನೆ ಪ್ರಹ್ಲಾದನ್ನ-ಲೋಕಪಾವನ್ನ

ಕರುಣಾಭರಣ ಸುಚರಣ ವಿತರಣನು
ಶರಣ ಜನರ ಭವಹರಣ ಗಿರಿಧರನು ೧

ಹರನು ಭಸ್ಮಾಸುರನಿಗೊಲಿದು ವರವನೀಯೆ ದನುಜ ಶಿವನ
ಶಿರದಿ ಕರವನಿಡಲು ಬರಲು ಪರಿದೋಡಿ ಲೋಕಗಳ ಸುತ್ತಿ

ಪರಮಾತ್ಮ ರಕ್ಷಿಸೆನ್ನಲು-ಮೋಹಿನಿರೂಪ
ಧರಿಸಿ ದೈತ್ಯನ್ನ ಬೇಗಲು-ಅವನಿಂದಲವನ
ಉರಿಸಿ ಭಸ್ಮವಮಾಡಲು-ಶಂಕರನು ಮೋದ
ವೆರಸಿ ನುತಿಸಿಪೋಗಲು-ಸುರರು ನಲಿಯಲು

ತರಳ ಧ್ರುವನು ತಂದೆಯ ತೊಡೆಯೊಳಿರಲು-ಮಲದಾಯಿ ರೋಷಾ
ತುರದಿ ಬೈದು ಪೋಗೆಂದು ನೂಕಿಸಲು-ಸಂತಾಪಗೊಂಡು
ಭರದಿ ವನದಿ ತಪವನಾಚರಿಸಲು-ಪ್ರತ್ಯಕ್ಷನಾಗಿ
ನಿರುಪಮ ಮೂರ್ತಿಯನು ತೋರಿಸಲು-ಧ್ರುವನ ಪಾಲಿಸಲು

ಸುರವರರಹುದೆನೆ ವರಧ್ರುವ ಪದವಿಯ
ಸರಸದಿ ದಯವನು ಕರುಣಿಸಿದ ಹರಿ ೨

ದುರುಳ ದುಶ್ಶಾಸನನು ಸರಸಿಜಾಕ್ಷಿ ದ್ರೌಪದಿಯ
ಸೆರಗು ಪಿಡಿದು ಸೆಳೆಯಲಾಗ ನೆರೆದ ಸಭೆಯ ಜನರ ಬೇಡಿ

ತರಳೆ ಬಾಯಾರೆ ಬಾಲೆಯು-ಮೊರೆಯಲಾಲಿಸಿ
ಹಿರಿದು ಅಕ್ಷಯ ಸೀರೆಯ-ನಿತ್ತು ಮಾನವ
ಸ್ಥಿರದಿಕಾಯನೆ ಶ್ರೀಪ್ರಿಯ-ಕುರುವಂಶವ ಸಂ
ಹರಿಸನೆ ಪಾಂಡವಪ್ರಿಯ-ಸನ್ಮುನಿಗೇಯ

ಸರಸಿಜಾಸನನಾಗಿ ಲೋಕವನು-ಸೃಜಿಸುವಸಿರಿ
ಯರಸನಾಗಿ ಪೋಷಿಪ ಶಂಕರನು-ತಾನಾಗಿ ಜಗವ
ಪರಿಹರಿಸುವ ಭಕ್ತವತ್ಸಲನು-ಇವನ ಪೊಗಳಲು
ಉರಗಾಧಿಪಗಾಗದು ನೀನಿದನು-ತಿಳಿದು ಬಲ್ಲವನು

ಅರಿಯದವನ ಪರಿ ಇರುವನು ನೂತನಾ
ವರಣ ಪುರದ ಖಾದಿರಿ ನರಕೇಸರಿ ೩

ವಚನ:—

ಈ ಪ್ರಕಾರದಿಂದ ಹರಿಯಂ ಕೊಂಡಾಡಿ ಮತ್ತು ದಶಾವತಾರವನೇನೆಂದು ಬಣ್ಣಿಸುತಿದ್ದಳು —

ಶ್ಲೋಕ:—

ಕವಿಕುಲ ಪರಿಪೋಷಕಾಸ್ತುಭೋಜ್ವಲವಿಭೂಷ
ದಿವಿಜಕುಲ ಲಲಾಮ ದಿತಿಕುಮಾರ ವಿರಾಮ
ಪ್ರವಿಮಲ ದಶರೂಪ ಭವ್ಯಸದ್ಗುಣ ಕಲಾಪ
ರವಿರುಚಿರ ಸುಂದರಾಂಗ ರಕ್ಷಮಾಂ ಶ್ರೀನೃಸಿಂಗ

ರಾಗ ಭೈರವಿ ಆದಿತಾಳ

ಹರಿಯೇ ನಮ್ಮನು ಪರಿಪಾಲಿಸುವ ನರ
ಹರಿಯೇ ನಮ್ಮಯ ಮೊರೆಯ ಲಾಲಿಸುವ ಪ

ಶರಣರ ರಕ್ಷಿಸೆ ದುರುಳರ ಶಿಕ್ಷಿಸೆ
ಪರಿಪರಿ ರೂಪವ ಧರಿಸಿದ ದೇವನು ಅ.

ಛಲದಿ ಸೋಮುಕವೇದ ಚೋರನಾಗಿ ಸಿಂಧು
ಗಿಳಿದು ಪೋಗಲು ಬ್ರಹ್ಮ ಚಿಂತೆಯಾಗಿ
ಜಲಜ ನೇತ್ರಗೆ ಬಿನ್ನೈಸೆ ಪೋಗಿ
ಖಳನಗೆಲಿದು ಚತುರಾಸ್ಯನಿಗೊಲಿದು
ಜಲಚರ ರೂಪದಲಿಂದ ಕರುಣಿಸಿದ ೧

ಕ್ಷೀರಾಬ್ಧಿಯನು ಮಂದರಾದ್ರಿಯಿಂದ ಮಥಿಸೆ
ನೀರಧಿಯಲ್ಲಿ ಗಿರಿಭಾರದಿಂದ
ಸಾರೆ ಕೇಳಿ ಸಂಪೂರ್ಣದಯದಿಂದ
ಧಾರುಣಿ ಧರವನು ಮಾರಿಧರಿಸಿ ಸು
ಧಾರಸ ಸುರರಿಗೆ ಬೀರಿದ ಕೂರುಮ ೨

ಹಿರಣ್ಯಾಕ್ಷನೆಂಬ ದಿತಿಜ ಭೂಮಿಯ ಕದ್ದು
ತೆರಳಿ ರಸಾತಳದಿ ಮಾಡಿ ನೆಲೆಯಾ
ಗಿರಲು ಪೋಗಿ ಆ ದುಷ್ಟದೈತ್ಯನೆದೆಯ
ನಿರಿದು ಧರಿತ್ರಿಯ ಪೊರೆದು ಸುದಂಷ್ಟ್ರದಿ
ಧರಿಸಿದ ನಿರ್ಮಲ ವರಹವತಾರದ ೩

ಹರಿಯೆ ಸರ್ವೋತ್ತಮನೆಂಬ ಬಾಲನ ಬೈದು
ಜರಿದು ಕಂಭದಿ ತೋರೊ ನಿನ್ನ ದೇವನ
ತರಳ ಎಂದೆನೆ ಘುಡಿಘುಡಿಸುತಲವನ
ತರಿದವನುದರದೊಳಿರುವ ಕರುಳಸರ
ಕೊರಳೊಳು ಧರಿಸಿದ ನರಕಂಠೀರವ ೪

ಈ ಮೂರು ಲೋಕವ ಬಲಿಯಾಳುತಿರಲು ಸುರ
ಸ್ತೋಮಾದಿಗಳಿಗತಿಕಷ್ಟವಾಗಲು
ಆ ಮಹಾ ಇಂದ್ರಪೋಗಿ ಬಿನ್ನೈಸಲು
ಭೂಮಿಯ ಮೂರಡಿ ಕಾಮಿಸಿ ಭಿಕ್ಷವ
ನೇಮದಿ ಧರಿಸಿದ ವಾಮನರೂಪದ ೫

ಪೊಡವೀಶರತಿ ದುಷ್ಟದೈತ್ಯರಂತೆ ಸರ್ವ
ಪೊಡವೀಸುರರನು ಬಾಧೆಪಡಿಸೆ ಚಿಂತೆ
ವಿಡಿದು ನಿಃಕ್ಷತ್ರಿಯರ ಮಾಡುವಂತೆ
ಕೊಡಲಿಯುಲಾ ನೃಪರಡವಿಯಸವರಿದ
ಕಡುಗಲಿಯಾದೆವೊಡ್ಡೆಯ ಶ್ರೀ ಭೃಗುಪತಿ ೬

ದಶರಥನುದರದಿ ಜನಿಸಿ ಬೇಗನೆ ನೊಂದ
ವಸುಧೆಯ ಭಾರವನು ಕಳೆಯಲಾಗ
ವಸುಧಾತ್ಮಜೆಯ ನೊಯಿದ ದುಷ್ಟಯೋಗ
ದಸುರದಶಾಸ್ಯನ ಅಸುಗಳನಿರ್ಜಿಸಿ
ದಸಮ ಪರಾಕ್ರಮ ಕುಶಲವಪಿತನಹೆ ೭

ಕುರುಕುಲವನುಪಾಯದಲಿ ಗೆಲಿದು ಪಾಂಡು
ವರ ತನಯರ ಮನೋರಥವನೊಲಿದು
ಪೊರೆದು ಕಂಸಾದಿ ದೈತ್ಯ ಶರಧಿ ಮುಳಿದು
ಬರೆ ಬಡಬಾಗ್ನಿಯತೆರದಲುರುಹಿ ಭ
ಕ್ತರ ಸಂರಕ್ಷಿಪ ಶ್ರೀಕೃಷ್ಣಾಚ್ಯುತ ೮

ಕ್ಷುದ್ರದೈತ್ಯರು ತ್ರಿಪುರವ ಸೇರಿ ಜನವಿ
ರುದ್ಧವಾದ ಉಪದ್ರಗಳ ಬೀರಿ
ಯುದ್ಧರಂಗದಿ ಮಲೆತಿರೆ ಮುರಾರಿ
ರುದ್ರನ ಬಾಣದಿ ರೌದ್ರದಿನೆಲೆಸಿ ವಿ
ರುದ್ಧಪುರವಳಿದ ಬುದ್ಧ ಶರೀರದ ೯

ಇಳೆಯೊಳಗಧರ್ಮಗಳು ಬಲುಹಾಗಿ ಧರ್ಮ
ವಳಿದು ಜಾತಿಗಳು ಸಂಕರವಾಗಿ
ಬಲುಹಾದ ಯವನರ ಮಯವಾಗಿ
ಬಳಲಿದ ಧಾತ್ರಿಯ ಸಲಹಲು ತುರಗವ
ಹಿಲದೊಳಗೇರಿದ ಕಲ್ಕ್ಯವತಾರದ ೧೦

ಇವು ಮೊದಲಾದನಂತರೂಪಗಳನು ತಾಳಿ
ವಿವಿಧ ಭೂಭಾರಕರ ಹರಣಗಳನು
ತಿವಿದು ಸದ್ಭಕ್ತರ ರಕ್ಷಣೆಯನು
ತವಕದಿ ಮಾಡುವ ಕಲಿಮಲ ಕ್ಷಾಲನ
ಕುವಲಯ ಲೋಚನ ಖಾದಿರಿ ನರಹರಿ ೧೧

ಶ್ಲೋಕ:—

ಅಗಣಿತಗುಣಸಿಂಧೋ ಆಪ್ತಸದ್ಭಕ್ತ ಬಂಧೋ
ನಿಗಮನಿಕರಪಾಲಾ ನೀರಜಾಗಾರಲೋಲಾ
ಖಗಕುಲಪ ತುರಂಗಾ ಕಾಂಚನಾಂಬರ ಶುಭಾಂಗಾ
ನಗಧರನುತ ಕೃಷ್ಣಾನಾಥಮಾಂ ಪಾಹಿಕೃಷ್ಣಾ

ತ್ರಿಪದಿ:—

ಇಂತು ಲಕ್ಷ್ಮೀಕಾಂತ ಕೃಷ್ಣನ
ನಂತರೂಪದಿ ತನ್ನ ಭಕುತರ
ಸಂತಸದಿ ರಕ್ಷಿಸನೆ ವಿಮಲಾನಂತಶಯನ ೧

ಇನಿತು ಗುಣಗಣಮುಳ್ಳ ಶ್ರೀಹರಿ
ಇನಿಯ ನಿನ್ನಯ ಸಖ್ಯನಾಗಿರೆ
ಮನದಿ ಸಂಶಯವಳಿದು ಯಾಚಿಸು ಘನಮಹಿಮನ ೨

ಇನ್ನು ಚಿಂತಿಸಲ್ಯಾಕೆ ಧನವನು
ನನ್ನಿಯಿಂದಲಿ ಕೊಡುವುದರಿದೇ
ನಿನ್ನ ನಂಬಿದೆನೆನಲು ಶ್ರೀಹರಿ ತನ್ನ ನೀವ ೩

ವಚನ:—

ಈ ಪ್ರಕಾರದಿಂದ ಶ್ರೀಮನ್ನಾರಾಯಣನಾದ ಶ್ರೀಕೃಷ್ಣನ ಅಗಣಿತ ಗುಣಗಣ ಪ್ರಭಾಭಾಸಮಾನಂಗಳಂ ಕೊಂಡಾಡಿ ದ್ವಾರಕಾಪುರ ನಿವಾಸನಾಗಿರುವ ಪರಮಾತ್ಮನಂ ಕೇಳಿ ಇಹಪರ ಸೌಖ್ಯಮಂ ಪಡೆದು ಬಾರೆಂದು ಚರಣಕ್ಕೆರಗಿದ ಸತಿಯಂ ಪಿಡಿದೆತ್ತಿ ಸಂತುಷ್ಟಾಂತರಂಗನಾಗಿ ಕುಚೇಲನೀ ನೆನ್ನುತಿರ್ದನು —

ದ್ವಿಪದಿ:—

ಮಂಜುಳಾನನೆ ನೀನು ಮಾಧವನಾದ
ಕಂಜನಾಭನ ಗುಣಂಗಳನು ವರ್ಣಿಸಿದೆ ೧

ಈ ಸುಯೋಗ್ಯತೆಯುಳ್ಳ ಇನಿಯಳೆಂತೆಂದು
ಭಾಸಮಾನದೊಳರಿಯೆ ಪಂಕಜಗಂಧಿ ೨

ನೀನಮಿತ ಗುಣವಂತೆ ನಿರುಪಮ ಶಾಂತೆ
ನೀನಖಿಳ ಶುಭವಂತೆ ನಿರ್ಮಲ ಕಾಂತೆ ೩

ಕಡುನೊಂದೆ ದಾರಿದ್ರ್ಯದಡವಿಯೊಳ್ ಸಿಲುಕಿ
ಮಡದಿ ನಿನಗೋಸುಗವು ಮಕ್ಕಳಿಗಾಗಿ ೪

ಪೋದಪೆನು ದ್ವಾರಕಾಪುರಿಗಾಗಿ ನಾನು
ಮೋದದಿಂದಾದರಿಸೆ ಮುಕುರಕಪೋಲೆ ೫

ನಿನ್ನಿಂದಲೆನಗಹುದು ನೀರಜೋದರನ
ಸನ್ನುತ ಚರಣ ಸಂದರುಶನವು ಬಾಲೆ ೬

ಇನ್ನೊಂದು ನುಡಿಯುಂಟು ಇಭರಾಜಗಮನೆ
ಚೆನ್ನಾಗಿ ನೀಕೇಳು ಪನ್ನಂಗವೇಣಿ ೭

ವಸುಧೀಶರೆಡೆಗೆ ದೇವಾಲಯಂಗಳಿಗೆ
ಶಿಶುಗಳ ಬಳಿಗೆ ಗುರುಚರಣ ದರುಶನಕೆ ೮

ರಿಕ್ತಹಸ್ತದಿ ಪೋಗಲದು ಅಶಿಕ್ಷಿತವು
ಮುಕ್ತಿದಾಯಕನಾದ ಮುರವಿದಾರಂಗೆ ೯

ಏನುವಾಯನಮುಂಟು ಇಂದಿರಾರಮಣ
ಗೇನು ಕೊಂಡೊಯ್ವೆನು ಈಶ್ವರೇಶ್ವರಗೆ ೧೦

ಕಾಣಿಕೆಯನೇನಿತ್ತು ಕೈಯನಾಮುಗಿವೆ
ಪ್ರಾಣನಾಯಕನಾದ ಭಕ್ತವತ್ಸಲಗೆ ೧೧

ಪತ್ರವಾಗಲಿ ಜಲಫಲವಾದಡಿನಿತು
ಇತ್ತುದೇ ಸಾಕೆಂಬ ಉತ್ತಮ ಶ್ಲೋಕ ೧೨

ಏನುಂಟು ಮನೆಯೊಳಗಿಭರಾಜವರದನಿಗೆ
ಏನಾದರೊಂದಿಷ್ಟು ತಾನು ಕೊಂಡೊಯ್ವೆ ೧೩

ನೋಡಿ ಸಂಪಾದನೆಯ ಮಾಡಿತಾರೆಂದು
ಆಡಿದ ನಾ ಕುಚೇಲನು ನಿಜಾಂಗನೆಗೆ ೧೪

ವಚನ:—

ಇಂತು ಪೇಳಿದ ಪತಿಯ ಮಾತಂ ಕೇಳಿ ಸಂತೋಷ ಸ್ವಾಂತಳಾಗಿ ಏನುಮಾಡಿದಳೆಂತೆನೆ.—

ಝಂಪೆ:—

ವಹಿಲದಲಿ ನೆರೆಹೊರೆಯ ಬಹಳ ಗೃಹಗಳ ತೊಳಲಿ
ಪ್ರಿಹಿಯ ತಿರಿತಂದಳಾ ಆಹಿರಾಜವೇಣಿ ೧

ಮಡದಿ ಮಜ್ಜನಗೈದು ಮಡಿವಸನವಳವಡಿಸಿ
ಕಡುಭಕ್ತಿ ಪೂರ್ವಕದಿ ಎಡೆಬಿಡದೆ ಮುದದಿ ೨

ಪುಂಡರೀಕಾಂಬಕನ ಕೊಂಡಾಡುತಲಿ ಪೃಥಕು
ತಂಡುಲವ ಮಾಡಿದಳು ಶುಂಡಾಲಗಮನೆ ೩

ನಿಷ್ಠೆಯಿಂದಲಿ ಕಾಂತೆ ಸೃಷ್ಟಿಗೊಡೆಯಗೆ ಮೂರು
ಮುಷ್ಟಿಯವಲಕ್ಕಿಯಂ ಸೃಷ್ಟಿಮಾಡಿದಳು ೪

ಮೀಸಲಾಗಿರಿಸಿದಳು ವಾಸುದೇವನಿಗೆಂದು
ಈ ಸುದ್ದಿ ಪತಿಗೊರೆದಳಾ ಸರೋಜಾಕ್ಷಿ ೫

ವಚನ:—

ಇಂತು ಪದಾರ್ಥಮಂ ಸಂಗ್ರಹಿಸಿ ಪತಿಯೊಡನೆ ಪೇಳಲು ಸತಿಯಂ ಸನ್ಮಾನಿಸಿದ ತದನಂತರದೊಳೆಂತೆನೆ.—

ಕಂದ:—

ಪದ್ಮಾಪ್ತನಸ್ತಮಿಸಿದನು
ಪದ್ಮಂಗಳು ಮುಕುಳಮಾಗೆ ಪದ್ಮಾಕರದೊಳ್
ಪದ್ಮಾಕ್ಷನ ನಿಜಭಕ್ತನು
ಸದ್ಮದೊಳಾರಾತ್ರಿಗಳೆದು ಸಂತೋಷದೊಳುಂ

ದ್ವಿಪದಿ:—

ಶ್ರೀಹರೇ ಯದುವೀರ ಶ್ರಿತಜನಾಧಾರ
ಪಾಹಿಮಾಂ ಕಮಲಾಕ್ಷ ಪಾಂಡವಪಕ್ಷ ೧

ರಾಮಕೃಷ್ಣ ಮುಕುಂದ ರಾಜೀವನಾಭ
ಸಾಮಜ ಪರಿಪೋಷ ಶ್ರೀಮನ್ನೃಸಿಂಹ ೨

ಎನುತ ಶ್ರೀಹರಿಯ ನಾಮಗಳ ನೆನೆವುತಲಿ
ಘನನಿದ್ರೆ ತಿಳಿದುಷಃಕಾಲದೊಳೆದ್ದು ೩

ನಿರ್ಮಲಾಂಗವ ತಾಳಿ ನೀತಿಕೋವಿದನು
ಧರ್ಮಜ್ಞ ಹಸ್ತಪಾದಗಳ ಉಷ್ಣ ೪

ಜಲದಿ ತಾತೊಳೆದು ದಂತಧಾವನ ಗೈದು
ಬಳಿಕ ನಳನಳಿಪ ಮುಖ ಮಜ್ಜನಮಾಡಿ ೫

ತುಳಸಿ ಮೃಣ್ಮಯಫಾಲ ತಿಲಕವನ್ನಿಟ್ಟು
ಬಲವಂದು ವೃಂದಾವನಕೆ ನಮೋ ಎನುತ ೬

ಪೊಡಮಟ್ಟು ಸಂಕಲ್ಪ ಪೂರ್ವಕಮಾಗಿ
ಕಡಲತಲ್ಪನ ಪಾದ ಗಂಗಾ ಜಲದಲಿ ೭

ಸ್ನಾನವಂ ಮಾಡಿ ತಜ್ಜಲತರ್ಪಣಂಗ
ಳನ್ನಿತ್ತು ಧೌತವಸ್ತ್ರಾನ್ವಿತನಾಗಿ ೮

ದರ್ಭಾಸನದಿ ಕುಳಿತು ದ್ವಾರಾವತಿಯಲಿ
ನಿರ್ಭರ ಫಾಲ ಭಾಗದೋಳೂರ್ಧ್ವಪುಂಡ್ರ ೯

ದ್ವಾದಶ ನಾಮಗಳ್ ತತ್ತತ್ಸ್ಥಳದೊಳು
ಮೋದದಿಂ ಧರಿಸಿ ಶ್ರೀಮುದ್ರಾಂಕಿತನಾಗಿ ೧೦

ಅಂಗಾರ ಚರ್ಚಿತಾಲಂಕಾರಯುಕ್ತ
ಶೃಂಗಾರ ತುಳಸಿ ಕರ್ಣಾದಿ ಭಾಗದಲಿ ೧೧

ಸಂಧ್ಯಾನ ಗುರುಮಂತ್ರ ಜಪತಪಧ್ಯಾನ
ವಂದನಾದಿಗಳು ಸದ್ಬ್ರಹ್ಮ ತರ್ಪಣವು ೧೨

ದೇವತಾರ್ಚನೆಯಗ್ನಿ ದೇವತಾಭಜನೆ
ಶ್ರೀವಿಷ್ಣುಪಾದ ಶಾಲಿಗ್ರಾಮ ತೀರ್ಥ ೧೩

ಸೇವನೆಯ ಮೊದಲಾದ ಶಿಷ್ಟ ಕರ್ಮಗಳ
ಸಾವಧಾನದಿ ಕೃಷ್ಣಾರ್ಪಣಂಗೈದು ೧೪

ಕಮಲಲೋಚನನ ಹೃತ್ಕಮಲದೊಳಿಟ್ಟು
ವಿಮಲ ಮಾನಸನಾಗಿ ವೇದಗೋಚರನ ೧೫

ಕಾಣುವೆನೆಂತೆಂಬ ಕಡು ಸಂತಸದೊಳು
ರಾಣಿಯ ಮುಖನೋಡೆ ಲಲನೆಯಾಪೃಥಕು ೧೬

ತಂಡುಲ ಮುಷ್ಟಿತ್ರಯವನ್ನು ವಿಮಲ
ಖಂಡೋತ್ತರೀಯದೊಳ್ ಕಟ್ಟಿಕೊಡಲಾಗ ೧೭

ಕಕ್ಷದೊಳಿಟ್ಟು ಶ್ರೀಕಾಂತ ಗೋವಿಂದ
ಪಕ್ಷಿವಾಹನ ಎಂದು ಭಜನೆಯಂ ಮಾಡಿ ೧೮

ತ್ವರಿತದಿಂ ಬರುವೆನು ತರುಣಿಯೆಂತೆಂದು
ಪೊರಮಟ್ಟು ಮನೆಯನಾ ಭೂಸುರೋತ್ತಮನು ೧೯

ವಚನ:—

ಈ ಪ್ರಕಾರದಿಂದ ಕುಚೇಲನು ನಿತ್ಯಕರ್ಮಂಗಳನ್ನಾಚರಿಸಿ ಸತಿಯಿತ್ತ ಉಪಾಯನವಂ ಪರಿಗ್ರಹಿಸಿ ದ್ವಾರಕಿಗೆ ಪೋಗಿ ಶ್ರೀಕೃಷ್ಣನ ಚರಣ ಸಂದರುಶನವಂ ಮಾಡಿ ಇಹಪರ ಸೌಖ್ಯವಂ ಸಂಪಾದನಂಗೈದು ನಾಳೆಬಹೆನೆಂದು ವನಿತೆಯೊಡನೆ ಪೇಳಿ ಮಂದಿರವಂ ಪೊರಮಟ್ಟು ಹರಿಸ್ಮರಣೆ ಪೂರ್ವಕಮಾಗಿ ತೆರಳಿದ ಸಮಯದಲ್ಲಿ ಶುಭಶಕುನಗಳಾದವದೆಂತೆನೆ.—

ರಾಗ ಶಂಕರಾಭರಣ ಅಟತಾಳ

ಜೋಡು ಬ್ರಾಹ್ಮಣರೆದುರು ಬಂದರು ಶ್ರುತಿತತಿಗಳ
ನೋಡುತ ಪಾಡುತಲಿ ಶ್ರೀಹರಿ ಮಹಿಮೆಯ ಭಕ್ತಿಯಿಂದ ೧

ಪೂರ್ಣ ಕುಂಭವಧರಿಸಿ ಮುದದೊಳು ಪುಣ್ಯನಿಧಿಯ ಸ್ತುತಿಸುತ
ಪೂರ್ಣಚಂದ್ರಾನನ ಸುವಾಸಿನಿ ಬೃಂದ ಬರಲು ೨

ವಾಮಗರುಡನು ವಾಯಸವು ಬಲವಾಗಿ ಬರಲು ಬಲದಲಿ
ಕಾಮಿಸುತ ಫಣಿಫಣದಿ ನಟಸುತ ಪ್ರೇಮವೆರೆಸಿ ೩

ಹರಿಣ ಭಾರದ್ವಾಜಹಂಗನು ಹಂಸ ಮೊದಲಾಗಿರುತಿಹ
ವರವಿಹಂಗಸಮೂಹ ಸುಮನೋಹರದಿ ಚರಿಸೆ ೪

ಮಹಿತ ಶುಭಕರವಾದ ಶಕುನದ ಮಹಿಮೆಗಳನು ನೋಡುತ
ಬಹುತರದ ಸಂತೋಷದಿಂದಲಿ ಬರುತಲಿರ್ದ ೫

ವಚನ:—

ಇಂತಾದ ಶುಭಶಕುನಂಗಳಂ ನಿರೀಕ್ಷಿಸುತ್ತ ಪೋಗುವ ಮಾರ್ಗದ ಸಂಭ್ರಮವದೆಂತೆನೆ.—

ದ್ವಿಪದಿ:—

ಹರಿಯಿಪ್ಪ ದ್ವಾರಕಾಪುರದ ಮಾರ್ಗದೊಳು
ಭರಿತಮಾಗಿರುವ ಸಂಭ್ರಮವನೇನೆಂಬೆ ೧

ಚಂದನ ಪುನ್ನಾಗ ಸಹಕಾರ ವಕುಳ
ಮಂದಾರ ಖರ್ಜೂರ ಮಾಧವೀಪನಸ ೨

ತಿಲಕದಾಡಿಮ ದ್ರಾಕ್ಷಿ ತಿಂತ್ರಿಣಿನಿಂಬ
ಫಲ ಯುಕ್ತಮಾನಂದ ಬದರಿ ತಕ್ಕೋಲ ೩

ನಾರಿಕೇಳಾಶ್ವತ್ಥ ನಾಗಹಿಂತಾಲ
ಸಾರರಂಭಾಕ್ರಮುಕ ಶಾರದ ಮುಖ್ಯ ೪

ಭೂರುಹ ವೃಂದದಿಂ ಪೂಜ್ಯಮಾಗಿರ್ಪ
ಆರಾಮಗಳು ಎಸೆವುತಿರ್ದವಲ್ಲಲ್ಲಿ ೫

ಸಾರಸ ಮಲ್ಲಿಕಾ ಜಾಜಿ ಚಂಪೇಯ
ಚಾರುಶಾವಂತಿ ಪಾರಿಜಾತಾದಿ ೬

ಪ್ರಸರ ಪೂವುಗಳಿಂ ಭಾಸುರಮಾದ
ಅಸಮ ಹಂಸಮಯೂರ ಅಮಿತ ಚಕೋರ ೭

ಶುಕಪಿಕ ನಾಗಾರಿ ಬಕಚಕ್ರವಾಕ
ಮುಖವಿಹಂಗಾನೇಕ ಮೃದುನುಡಿಗಳಿಂದ ೮

ವರವಧೂ ಯುಕ್ತದಿಂ ವನಜಾಕರದೊಳು
ಸರಸದಿಂಝೇಗೈವಷಟ್ಪದಗಳಿಂದ ೯
ಅನುಪಮವಾದ ಉದ್ಯಾನವನಗಳು
ಮನಕೆ ಸಂತೋಷವುಂ ಮಾಳ್ಪಮಾರ್ಗಗಳು ೧೦
ದೇವಾಲಯಂಗಳು ದೀರ್ಘಸತ್ರಗಳು
ಪಾವನವಾದ ಪಾನೀಯ ಶಾಲೆಗಳು ೧೧
ಸಾಲವೃಕ್ಷಗಳು ಸಾಕಾರ ಪುಂಜಗಳು
ಮೇಲಾದ ನದಿಗಳು ಮಿಸುನಿಜಗುಲಿಗಳು ೧೨
ನೀರಿಂದ ನೆಳಲಿಂದ ನಿರ್ಮಲದಿಂದ
ಊರಿಂದ ಪುರದಿಂದ ನಗರಗಳಿಂದ ೧೩
ಇಂಪಾದ ಜನರಿಂದ ಹಿತವಾಕ್ಯದಿಂದ
ಸೊಂಪಾದ ನೆಲಗಳಿಂ ಕಂಪಾದರಿಂದ ೧೪
ಎಲ್ಲಿ ನೋಡಿದರಲ್ಲಿ ಯದುಕುಲೋದ್ಭವನ
ಪಲ್ಲವಾಂಘ್ರಿ ಸ್ಮರಣೆ ಪಠಣ ದೀಕ್ಷಿತರು ೧೫
ಎಲ್ಲಿ ನೋಡಿದರಲ್ಲಿ ಇಂದಿರಾಪತಿಯು
ಸೊಲ್ಲು ಸೊಲ್ಲಿಗೆ ನುತಿಪ ಸುವ್ರತೋತ್ತಮರು ೧೬
ಇಂತಪ್ಪ ಪಥಮಂ ನಿರೀಕ್ಷಿಸುತಲಾಗ
ಸಂತೋಷದಿಂ ದ್ವಿಜನು ಚರಿಸುತ್ತಲಿರ್ದ ೧೭

ತ್ರಿಪದಿ:—

ಮಾಮರನ ತಳಿರುಗಳ ನೋಡುತ
ಮಾಧವನ ಚರಣಂಗಳೆನುತಲಿ
ಭೂಮಿಸುರ ಕರಗಳನು ಮುಗಿದನು ನೇಮದಿಂದ ೧
ಲತೆಗಳನು ಕಾಣುತ್ತ ಕೃಷ್ಣನ
ಲಲಿತ ಬೆರಳುಗಳೆಂದು ಮುದದಲಿ
ಸ್ತುತಿಸಿ ಸಾಷ್ಟಾಂಗಗಳ ಮಾಡುವನುಜ್ವಲದೊಳು ೨

ಜಲಚರಂಗಳ ಕಂಡುದೇವನ
ಜಾನು ಜಂಘೆಗಳೆಂದು ಹರುಷದಿ
ಬಲು ನಮಸ್ಕಾರಗಳ ಮಾಡುವ ಭಕ್ತಿಯಿಂದ ೩

ಕದಳಿಕಾವೃಕ್ಷಗಳು ನಮ್ರಯು
ಕಮಲನಾಭನ ತೊಡೆಗಳೆನುತಲಿ
ಸದುವಿನಯದೊಳು ಪಾಡಿಪೊಗಳುವ ಸಂಭ್ರಮದೊಳು ೪

ತಿಳಿಗೊಳನೊಳಿಹ ಸುಳಿಗಳಿವು ಶ್ರೀ
ನಳಿನನಾಭನ ನಾಭಿಯೆನುತಲಿ
ಬಳಲಿ ಬಲವಂದೆರಗಿ ನುತಿಪನು ಭಾವದಿಂದ ೫

ಬಾಲ ಮೃಗಪತಿ ಮಧ್ಯಭಾಗವ
ಲೀಲೆಯಿಂದಲಿ ಈಕ್ಷಿಸುತ ಸಿರಿ
ಲೋಲನನುಪಮ ಮಧ್ಯವೆನುತಲಿ ಮೌಳಿ ಮಣಿವ ೬

ಪದ್ಮಪತ್ರವ ನೋಡಿ ಯದುಕುಲ
ಪತಿಯ ಪೀತಾಂಬರವಿದೆನುತಲಿ
ಪದ್ಮಸಮ ಕರಗಳನು ಮುಗಿದನು ಪರಮನಯದಿ ೭

ಪುಲಿನಗಳ ಚೆಲುವಿಕೆಯನೀಕ್ಷಿಸಿ
ಪುಣ್ಯಪುರುಷನ ಜಘನವೆನುತಲಿ
ಒಲಿದು ಕೊಂಡಾಡಿದನು ಮನದಲಿ ವಹಿಲದಿಂದ ೮

ಈಡಳಿದ ನ್ಯಗ್ರೋಧಪತ್ರವ
ನೋಡಿ ಶ್ರೀಹರಿಯುದರವೆನುತಲಿ
ನೋಡಿ ಮನದಲಿ ವಂದನೆಯ ತಾ ಮಾಡುತಿಹನು ೯

ನದಿಚಯಗಳ ವಿಶಾಲಪಾತ್ರೆಯು
ನಯನದಿಂದಲಿ ಕಾಣುತಾಗಲೆ
ಮದನನಯ್ಯನ ವಕ್ಷವೆನುತಲಿ ಮನದಿ ನಲಿವ ೧೦

ಕರಿ ಕರಂಗಳ ಕಂಡು ನಿರ್ಜರ
ವರನ ವರಬಾಹುಗಳಿವೆನುತಲಿ
ಶಿರವ ಬಾಗುವನಧಿಕಸಂತಸಭರಿತನಾಗಿ ೧೧

ಮಲಯ ಮಾರುತ ಬಂದುಬೀಸಲು
ಮಧುವಿರೋಧಿಯ ಗಳದಿ ರುಕ್ಮಿಣಿ
ಒಲಿದು ಪೂಸಿದ ಗಂಧವೆನುತಲಿ ಉಜ್ವಲಿಸುವ ೧೨

ಕಮಲಮುಖ ಬಿಂಬಾಧರವು ದಾ
ಡಿಮವು ರದನವು ಕುಮುದನೇತ್ರವು
ಅಮರವಂದ್ಯನಿಗೆನುತ ಪೊಗಳುವನದ್ಭುತದೊಳು ೧೩

ಚಂಪಕವು ನಾಸಿಕವು ಫಣಿಫಣ
ಚಾರು ಕರ್ಣಗಳೆಸೆವ ಮೃಗಮದ
ದಿಂಪು ದೇವರ ದೇವಗೆನುತಲಿ ಹಿತದಿ ನುಡಿವ ೧೪

ಭ್ರಮರಪಙ್ತಿಯ ಕಂಡು ಲಕ್ಷ್ಮೀ
ಪತಿಯ ಕುಂತಳವೆಂದು ಸರ್ವವು
ಕಮಲ ಹಸ್ತನ ಸರ್ವಶೋಭನ ಗಾತ್ರವೆಂಬ ೧೫

ವಚನ:—

ಈ ಪ್ರಕಾರದಿಂದ ಸಕಲ ಪದಾರ್ಥಂಗಳಂ ಪರಮಾತ್ಮನ ಸರ್ವಾಂಗ ಭಾವವೆಂದು ವರ್ಣಿಸುತ್ತ ಮತ್ತೀನೆಂದು ನೆನೆಯುತಿರ್ದನು.—

ರಾಗ ಮೋಹನ ಏಕತಾಳ

ಚೆಲುವಾಗಿಹ ಕುಂಜಕುಟೀರಗಳನು
ಒಲವಿನಲಿ ಹರಿದೇವಾಲಯವೆಂಬ ೧

ಮೃದುತರ ತಳಿರೆಲೆ ಮುದ್ದುಗೋಪಾಲನ
ಪದಮಲ ಸಿಂಹಾಸನವೆಂದಿರುವ ೨

ಶುಭಕರವಾಗಿಹ ಶುದ್ಧೋದಕಗಳು
ಅಭಿಷೇಕಕೆ ಶ್ರೀಹರಿಗೆಂದೆಣಿಪ ೩

ಚಂದನಗಳರುಣ ಚಂದನ ಪರಿಮಳ
ಗಂಧಾಕ್ಷತೆ ಹರಿಗೆಂದು ಮೋದಿಸುವ ೪

ಎಳೆ ತುಳಸೀದಳ ಜಲಜಾದಿ ಕುಸುಮಂ
ಗಳ ಹರಿಗೆ ಸಮರ್ಪಣೆ ಮಾಡುವನು ೫

ಭವ್ಯ ಮಧುರತರ ಫಲಗಳನು ಕೃಷ್ಣಗೆ
ದಿವ್ಯನೈವೇದ್ಯವೆಂದೆನುತಾಡುವನು ೬

ಸಾಗರಶಯನಗೆ ನಾಗವಲ್ಲಿದಳ
ಪೂಗೀಫಲ ತಾಂಬೂಲವನಿಡುವ ೭

ಸರ್ವಪದಾರ್ಥವು ಸಾಮಜವರದಗೆ
ಸರ್ವೋಪಚಾರ ಸಮರ್ಪಣೆಗೈವ ೮

ನುಡಿಗಳೆಮಂತ್ರವು ನಡೆ ನಮಸ್ಕಾರವೆಂ
ದಡಿಗಳಿಗೆರಗುತ ಕಡುಭಕ್ತಿಯಲಿ ೯

ವಚನ:—

ಇಂತು ಮಾನಸಪೂಜೆಯಂ ಮಾಡುತ್ತ ಏಕಾಗ್ರ ನಿಷ್ಠಾಗರಿಷ್ಠನಾಗಿ ಪೋಗುತ್ತ ತನ್ನ ಮನದೋಳ್ ಏನೆಂದು ಯೋಚಿಸುತಿರ್ದನು.—

ಝಂಪೆ:—

ಬ್ರಹ್ಮಾದಿಗಳನೊಮ್ಮೆ ಬಗೆಯದ ರಮೇಶ ಬಡ
ಬ್ರಾಹ್ಮಣನ ಭಾವಿಪನೆ ಭಕ್ತನೆಂದೆನುತ ೧

ಸನಕಾದಿ ಮುನಿಗಳಿಗೆ ಸಮಯವೀಯದ ದೇವ
ಎನಗೆಂತು ಲಭಿಸುವನೊ ನಂಬಿದವನೆಂದು ೨

ವರವೇದತತಿಗಗೋಚರನಾದ ಪರಮಾತ್ಮ
ತಿರುಕಹಾರವಗೆ ಗೋಚರವಾಗಲಹನೆ ೩

ಪೃಥಿವಿ ರಮೆಯರು ಬಡಿಸೆ ಭುಂಜಿಸದ ನಿಜತೃಪ್ತ
ಪೃಥುಕ ತಂಡುಲವ ಮೆಲಬಲ್ಲನೇ ಬಯಸಿ ೪

ದ್ವಾರಪಾಲಕರೆನ್ನ ದ್ವಾರಪೊಗಗೊಡದಿರಲು
ನಾರಾಯಣಗೆ ಪೇಳ್ವರಾರುಂಟು ಸಖರು ೫

ವಚನ:—

ಇಂತು ಯೋಚಿಸಿಕೊಳುತ್ತಾ ಪೋಗುತ್ತಿರಲು ಮುಂದೆ ದೂರದಿಂದ ದ್ವಾರಕಾ ನಗರವಂ ನೋಡಿ ಏನೆನ್ನುತಿರ್ದನು.—

ರಾಗ ಪಂತುವರಾಳಿ ಅಟತಾಳ

ನೋಡಿದೆ ದ್ವಾರಕಾಪುರವ, ಪುಣ್ಯ
ಮಾಡಿದೆ ಬೇಡಿದೆ ಇಹಪರದೊರವ ಪ.

ಹೇಮಮಯದ ಗೋಪುರಗಳ, ಮಣಿ
ಸ್ತೋಮಖಚಿತ ರುಚಿರದ ಕಲಶಗಳ
ಸೋಮಸನ್ನಿಭ ಕೊತ್ತಲುಗಳ ಸೂರ್ಯ
ಧಾಮದಂತಿರುವ ಕೋಟೆಗಳ ತೆನೆಗಳ ೧

ಥಳಥಳಿಸುವ ಸುರಥಗಳ, ಮುಗಿ
ಲೊಳು ವಾದಿಸುತಲಿಹ ಚಂದ್ರಶಾಲೆಗಳ
ಹೊಳೆವ ಮೇಲುಪ್ಪರಿಗೆಗಳ ಕಳ
ಕಳಿಸುವ ಹೋಮಧೂಮದ ಸೊಡರುಗಳ ೨

ಕುಂಠಿತಭವಭಯಶೂಲ, ಭೂವೈ
ಕುಂಠವಲ್ಲವೆ ಮುಕ್ತಜನಕನುಕೂಲ
ಕಂಠೀರವ ಮುಖಶಾಲ, ನರ
ಕಂಠೀರವನಿಪ್ಪ ವಾಸವಿಶಾಲ ೩

ವಚನ —

ಈ ಪ್ರಕಾರದಿಂದ ದ್ವಾರಕಾಪಟ್ಟಣದ ಶೋಭಾಯಮಾನವಂ ದೂರ ದಿಂ ಕಂಡು ಸಾಷ್ಟಾಂಗ ದಂಡಪ್ರಣಾಮಂಗಳಂ ಮಾಡಿ ಭಯಭಕ್ತಿಯುಕ್ತ ನಾಗಿ ಬರುತ್ತಾ ಸಮೀಪವಂ ಸಾರ್ದು ಶರಧಿಯ ಸೇತುವೆಯಂ ಕಳೆದು ಪುರ

ದ್ವಾರವಂ ಪೊಕ್ಕು ಪಟ್ಟಣದ ಸೌಭಾಗ್ಯವಂ ನೋಡುತ್ತಾ ಬರುತ್ತಿರ್ದನ ದೆಂತೆನೆ —

ದ್ವಿಪದಿ:—

ವನಧಿ ಮಧ್ಯದಿ ಶ್ರೀವರನಿರ್ಪಸದನ
ವೆನುತ ಪೇಳುವ ಶಾಸ್ತ್ರವಿಧಿಗಿದು ಸಾಕ್ಷಿ ೧
ಸತ್ಯವೆಂಬುದರಿಂದ ಜಲಧಿ ಮಧ್ಯದಲಿ
ನಿತ್ಯೋತ್ಸವಗಳಿಂದ ನಿರ್ಮಲವಾದ ೨
ದ್ವಾರಕಾಪುರದ ಶೃಂಗಾರವಂ ಪೊಗಳ
ಲಾರನಾ ಫಣಿಕುಲ ರಾಜಶೇಖರನು ೩
ವರ ವಿಶ್ವಕರ್ಮನಿಂ ವಿರಚಿತವಾದ
ಸರಸ ಸದ್ವಾಸ್ತುಶಾಸ್ತ್ರಪ್ರಕಾರವೆನೆ ೪
ಅನುಪಮ ವಜ್ರಮಯಾವನೀತಲವು
ಘನತರದ ಕಸ್ತೂರಿಕರ್ದಮಲಿಪ್ತ ೫
ನಿರುಪಮ ಮೌಕ್ತಿಕಾನ್ವಿತರಂಗವಲ್ಲಿ
ಸರಸಪ್ರವಾಳ ವಿಸ್ತರದ ಕಾರಣೆಯು ೬
ಪನ್ನೀರ ಚಳಕದಿಂ ಬಹಳ ಸೌರಭ್ಯ
ಮನ್ನೀವ ಧೂಪ ಸಾಂಬ್ರಾಣಿ ವಾಸನೆಯು ೭
ಸೋಮ ವೀಧಿಗಳು ಪತ್ಸೂರ್ಯವೀಧಿಗಳು
ರಾಮಣೀಯಕವಾದ ರಾಜವೀಧಿಗಳು ೮
ಕನಕ ಭಿತ್ತಿಗಳು ಕುಂದಣದ ಗಾರೆಗಳು
ಸನಯಾತ್ಮ ಮರಕತ ಸ್ತಂಭಪಙ್ತಿಗಳು ೯
ನೀಲದ ತೊಲೆಗಳು ನಿರುಪಮರತ್ನ
ಸಾಲು ಬೋದಿಗೆಗಳು ಸಮವಿಲ್ಲದಿರ್ಪ ೧೦
ಮೇಲು ಮುಚ್ಚುಗಳು ಗೋಮೇಧಿಕ ರಾಜಿ
ಮೇಲಾದ ಪುಷ್ಯರಾಗದಲೋವೆಗಳು ೧೧

ಸಿಲವು ಕನ್ನಡಿಗಳು ನಿಜಕವಾಟಗಳು
ಲಲಿತದಿಂ ಮಕರ ತೋರಣ ಪತಾಕೆಗಳು ೧೨

ಮಿನುಗುವ ನವರತ್ನ ಮೇಲು ಕುಚ್ಚುಗಳು
ಪ್ರಣುತಿಸಲ್ ಶತಕೋಟಿ ಭಾನುತೇಜಗಳು ೧೩

ಎಣೆಯಿಲ್ಲದೀಪರಿಯಲಿರುವ ಭವನಗಳು
ಗಣನೆಯಿಲ್ಲದ ಮಹಾಕಾಂತಿ ಪುಂಜದಲಿ ೧೪

ಅತುಲ ಸೌಧಂಗಳು ಅತಿ ಗೋಪುರಗಳು
ಅತಿಯಾದ ಚಿತ್ರವಿಚಿತ್ರ ಶಾಲೆಗಳು ೧೫

ಮಂದಿರಂಗಳಲಿ ಸದ್ಬೃಂದಾವನಗಳು
ಸಂದಣಿ ಸತಿಸುತ ಬಾಂಧವಾದಿಗಳು ೧೬

ಇಹಪರದ ಸೌಖ್ಯದಿಂದಿರುವ ಪುಣ್ಯ
ಮಹಿಮರುತ್ತಮರು ಧರ್ಮಾತ್ಮ ಕೋವಿದರು ೧೭

ಚತುರಾಸ್ಯ ಸಮಗುಣಾನ್ವಿತರು ಬ್ರಾಹ್ಮಣರು
ಅತಿರಥ ಮಹಾರಥಾಶ್ರಿತರು ಭೂಭುಜರು ೧೮

ಧನಪಾಲನಣಕಿಪ್ಪ ಧರ್ಮವರ್ತಕರು
ಅನುಸರಿಪ ಪರಿಚರಾತ್ಮಕ ಪಾದಜರು ೧೯

ವರ್ಣಾಶ್ರಮಾಚಾರವರ್ಧಮಾನಕರು
ನಿರ್ಣಯ ಚಿತ್ತರು ನಿಸ್ಸಂಶಯುಕರು ೨೦

ಗಜಹಯಸ್ಯಂದನ ಕಾಲ್ಬಲಾನೀಕ
ವಿಜಯ ಭಾಷಾಘೋಷ ವಿಪುಲ ಮಂಗಳವು ೨೧

ಪಾನೀಯ ಶಾಲೆಗಳ್ ಪುಣ್ಯವೀಧಿಗಳು
ನಾನಾ ವಿನೋದವು ನಯನದುತ್ಸಹವು ೨೨

ಕ್ರೀಡಾವನಂಗಳು ಕೃತಕಾಚಲಗಳು
ಜೋಡಿಲ್ಲದಿಹ ವೃಕ್ಷ ಶುಕಪಿಕಾಳಿಗಳು ೨೩

ಹಗಲಿರುಳೆಂಬ ಭೇದಗೋಚರವು
ನಿಗಮಶಾಸ್ತ್ರ ಪುರಾಣ ನಿಬಿಡ ಶಬ್ದಗಳು ೨೪

ಹರಿಯ ಶ್ರೀಪಾದ ಸಂದರುಶನೋತ್ಸವಕೆ
ಬರುತಿಪ್ಪ ಸದ್ಭಕ್ತ ಭಾಗಧೇಯಕರು ೨೫

ಬ್ರಹ್ಮಾಮರೇಂದ್ರಾದಿ ಪರಮ ನಿರ್ಜರರು
ಬ್ರಹ್ಮಮಾನಸ ಪುತ್ರರಾದ ಋಷಿವರರು ೨೬

ಪರಮಹಂಸರು ಸದಾ ಬ್ರಹ್ಮಚಾರಿಗಳು
ಗರುಡ ಗಂಧರ್ವ ಕಿನ್ನರಯಕ್ಷ ಮುಖರು ೨೭

ವ್ಯಾಸ ವಶಿಷ್ಠಾದಿ ವರಮುನೀಶ್ವರರು
ಭೂಸುರೋತ್ತಮರು ಸದ್ಭೂಪಾಲರುಗಳು ೨೮

ಕವಿಗಳು ವಂದಿ ಮಾಗಧರು ಯಾಚಕರು
ವಿವಿಧ ವಿದ್ಯದೊಳು ಕೋವಿದರಾದ ಬುಧರು ೨೯

ಭಕ್ತರು ನಿರುಪಮ ಭಾಗವತ ಜನರು
ಮುಕ್ತಿ ಯೋಗ್ಯರುಗಳು ಮುನಿಕುಲೋತ್ತಮರು ೩೦

ಮೊದಲಾದ ಸುಜ್ಞಾನ ಮೂರ್ತಿಗಳ್ ಹರಿಯ
ಪದ ಪದ್ಮ ದರುಶನ ಭಾಗ್ಯ ಕಾಂಕ್ಷಿತರು ೩೧

ಓಲೈಸುತಿಹರು ಸಮಯಮಾಗದೆ ದ್ವಾರ
ಪಾಲಕರನು ಮಹಾಭಯ ಭಕ್ತಿಯಿಂದ ೩೨

ಇಂತಪ್ಪ ಪುರದ ಶ್ರೀಮಂತ ಸಂತಸಪ
ಸಂತೋಷದಲಿ ನೋಡಿ ಪಲಿತಲೆದೂಗಿ ೩೩

ವಿಸ್ಮಯನಾಗಿ ನಾವಿಂದಿಗೆ ಧನ್ಯ
ರಸ್ಮತ್ಪಿತೃಗಳು ಪರಮ ಪಾವನರು ೩೪

ಎಂದು ಆನಂದಾಬ್ಧಿಯಿಂದಲೋಲಾಡಿ
ಬಂದ ಮಾರ್ಗಶ್ರಮದ ಭಾವವಂ ಮರೆದು ೩೫

ಶತಕೋಟಿ ಸೂರ್ಯದೀಧಿತಿಯು ಧಿಕ್ಕರಿಪ
ಅತುಲಿತವಾದ ಅಪ್ರಾಕೃತವಾದ ೩೬
ಕಮಲೇಶನರಮನೆಗಭಿಮುಖನಾಗಿ
ವಿಮಲ ಮಾನಸದಿಂದ ವಿಪ್ರನೈತಂದ ೩೭

ವಚನ:—

ಈ ಪ್ರಕಾರದಿಂದ ದ್ವಾರಕಾನಗರ ಶೃಂಗಾರವಂ ನೋಡುತ್ತ ಶ್ರೀ ಕೃಷ್ಣರಾಯನರಮನೆಗಭಿಮುಖನಾಗಿ ಬಂದು ದೂರದಿಂ ನಿಂದು ದ್ವಾರವಂ ನಿರೀಕ್ಷಿಸಿ ತನ್ನೊಳು ತಾನೇನೆನ್ನುತಿರ್ದನು.—

ಝಂಪ —

ಲೋಕನಾಯಕನಾದ ರುಕ್ಮಿಣೀಶನ ದರುಶ
ನಾಕಾಂಕ್ಷಿತರು ನಿಖಿಲ ಲೋಕವಾಳುವರು ೧
ಸಮಯವಾಗದೆ ಇರುವ ಸಮಯದೊಳು ನಾನೆಂತು
ಕಮಲನಾಭನ ಚರಣ ಕಮಲಗಳ ಕಾಂಬೆ ೨
ದ್ವಾರಪಾಲಕರೆನ್ನ ತಡೆದರವರಿಗೆ ಕೊಡಲು
ದಾರತ್ವ ಮೆಂತಿಹುದು ಧನದೊಳಧಿಕನಲಾ ೩
ದ್ವಾರಪಾಲಕರೊಳಂತರ್ಯಾಮಿಯಾಗಿರುವ
ನಾರಾಯಣನೆ ದಿಕ್ಕು ನನಗನ್ಯರುಂಟೆ ೪
ಎನುತ ತನ್ನಯ ಮನದಿ ವನಜನಯನನ ಮೂರ್ತಿ
ಯನು ನಿಜ ಧ್ಯಾನದಿಂದಡಿಯಿಟ್ಟು ನಡೆದ ೫

ವಚನ —

ಇಂತು ಕುಚೇಲನು ಹರಿಧ್ಯಾನ ಪುರಸ್ಸರನಾಗಿ ಬರುವಾತನಂ ಕಂಡು ದ್ವಾರಪಾಲಕರೇನೆನ್ನುತಿರ್ದರು —

ತ್ರಿಪದಿ:—

ಯಾರು ನೀನೆಲ್ಲಿಂದ ಬಂದೆ ಇ
ದಾರ ಮನೆಯೆಂದೊಳಗೆ ಪೋಗುವೆ
ದಾರಿತಪ್ಪಿದೆಯೇನೊ ಬ್ರಾಹ್ಮಣ ಯಾರು ನೀನು ೧

ಕಮಲಭವ ಮುಖ್ಯ ಸುರರಿಗೆ
ಸಮಯವಾಗದ ಹರಿಯ ಭವನಕೆ
ಗಮಕದಿಂದಲಿ ಪೋಪೆ ಮನದಲಿ ಭ್ರಮಣೆವಿಡಿದು ೨

ಅಗ್ರಹಾರದ ಕೇರಿಯಲ್ಲಿದು
ನುಗ್ಗಿ ಪೋಪರೆ ವಿಪ್ರ ಭವನವೆ
ಅಗ್ರವರ್ಣವನಾಗಿ ತಿಳಿಯದೆ ಮಾರ್ಗವೆಂದು ೩

ನಿಲ್ಲೆಲೋ ಸಮಾರಾಧನೆಯ ಮನೆ
ಯಲ್ಲ ಭೋಜನಶಾಲೆಯಲ್ಲಿದು
ಎಲ್ಲಿ ಪೋಗುವೆ ಭಕ್ಷ್ಯ ಭೋಜ್ಯಗಳಿಲ್ಲ ಉಣಲು ೪

ಎತ್ತಲಾದರು ಪೋಗು ಭೋಜನ
ದೊತ್ತು ಹೋಗುತಲಿದಕೊ ತಡೆಯದೆ
ಚಿತ್ತದೊಳಗೇನುಂಟು ಪೇಳ್ಳೆ ಉತ್ತರವನು ೫

ವಚನ:---

ಇಂತು ನುಡಿದ ದ್ವಾರಪಾಲಕರೊಳು ಭೂಸುರನೇನೆನ್ನುತಿರ್ದನು ---

ಯಾಲಪದ:---

ನಿಲ್ಲದೆ ಹಾರಿಹೋಗುವನಲ್ಲ ಕುಚೇಲನೆಂತೆಂದು
ಬಲ್ಲವರು ಪೇಳುತಿರುವರು, ಎನ್ನಯ ನಾಮ
ಇಲ್ಲಿಗಾಗಿ ಬಂದಿಹೆ ನಾನು ೧

ಪರಮಾತ್ಮನಾದ ಶ್ರೀಕೃಷ್ಣನರಮನೆಯೆಂದರಿತಿಹೆನು
ಬರಿದೆ ದಾರಿಯ ತಪ್ಪಲಿಲ್ಲವಾದುದರಿಂದ
ಹರಿಯ ದರುಶನಾರ್ಥಿ ನಾನಿಂದು ೨

ದೇವದೇವನಾದ ಕೃಷ್ಣ ದೇವನೊಳು ಬಿನ್ನಪವ
ನೀವು ಪೇಳುವುದು ದಯದಿಂದ, ನಿಮ್ಮಯ ಮಿತ್ರ
ನೋರ್ವ ಕುಚೇಲ ಬಂದನೆಂದು ೩

ವಚನ —

ಈ ಪ್ರಕಾರದಿಂದ ನುಡಿದ ನುಡಿಗಳಂ ಕೇಳಿ ಆಶ್ಚರ್ಯವಂ ಬಟ್ಟು ದ್ವಾರಪಾಲಕರೇನೆನ್ನುತಿರ್ದನು.—

ರಾಗ ಬೇಹಾಗ್ ಏಕತಾಳ

ನಾಚಿಕೆಯಿಲ್ಲವೆ ನರಹರಿಯಾಗಿಹ
ಶ್ರೀ ಚತುರ್ಭುಜನಿಗೆ ಸ್ನೇಹಿತನೆಂಬೆ ೧
ಎವ್ರೊಡನಾಡಿದ ಹೆಮ್ಮೆನಮಾತುಗ
ಳೊಮ್ಮೆಗೆ ಪೇಳದೆ ಸುಮ್ಮನೆ ಪೋಗೊ ೨
ಪೊಡವಿಯ ರಕ್ಷಿಪ ಮೃಡಮುಖರೊಡೆಯಗೆ
ಬಡಬ್ರಾಹ್ಮಣ ನೀ ಕಡು ಸ್ನೇಹಿತನೆ ೩
ಉಡುವುದಕಂಬರ ಉಣುವುದಕನ್ನವು
ಎಡೆಗಾಣದವನು ನುಡಿವರೆ ಹೀಗೆ ೪
ನಿನ್ನಯ ಪೆಸರಲಿ ನಿನ್ನಯ ಘನತೆಯು
ಬಣ್ಣಿಸಿದಂತಿದೆ ಬಿನ್ನಾಣವುಂಟೆ ೫

ವಚನ:—

ಇಂತಾಡಿದ ದ್ವಾರಪಾಲಕರೊಳು ಕುಚೇಲನೇನೆನ್ನುತಿರ್ದನು.—

ಸೀಸಪದ್ಯ —

ಕೇಳಿರೈ ನನ್ನಿಷ್ಟುಬೀಳು ಮಾತುಗಳಿಂದ
ಜಾಳು ಮಾಡುವರೀತಿ ಹೇಳಬಹುದು
ಬಡವನಾದರು ನಾನು ಬಾಲ್ಯದೋಳ್ ಸಾಂದೀಪ
ರಾದ ಸದ್ಗುರುಗಳ ಪಾದದಲ್ಲಿ
ಭಕ್ತಿಯಿಂದಲಿ ನಾನು ಪರಮಾತ್ಮನಹ ಕೃಷ್ಣ
ನೊಡಗೂಡಿ ವಿದ್ಯೆಗಳ ಪಡೆದರಿಂದ
ಎನಗೆ ಶ್ರೀರಮಣನೋಳ್ ಘನಮಾದ ಮಿತ್ರತ್ವ
ಸಂಪ್ರಾಪ್ತಮಾಗಿರಲ್ ಸಕಲರೊಡೆಯು

ನಾದ ದೇವನ ಶ್ರೀಪಾದ ನಳಿನಯುಗಳ
ದರುಶನಕೆ ಬಂದೆ ನೀವೂತು ಹರಿಗೆ ಪೇಳಿ
ಬರಲಿಯೆಂದರೆ ಬಿಡಿರೆನ್ನ ಪರಿಪರಾಕು
ಮಾಡೆ ನಾಂ ಪೋಪೆ ಪ್ರತಿಮಾತನಾಡಲಮ್ಕೆ

ವಚನ:—

ಇಂತು ಪೇಳಿದ ಕುಚೇಲನ ಮಾತಂ ಕೇಳಿ ಓರ್ವ ದ್ವಾರಪಾಲಕಂ ಘೀಲಸೆದ್ದು ಪೋಗಿ ಶ್ರೀ ರುಕ್ಮಿಣೀ ಸತ್ಯಭಾಮಾದಿ ಕಾಂತಾರತ್ನಗಳೆಂಬ ನಕ್ಷತ್ರ ಮಧ್ಯದಲ್ಲಿ ಪೂರ್ಣ ಚಂದ್ರನೋಪಾದಿಯಲ್ಲಿ ಪೊಳೆವ ಶ್ರೀಕೃಷ್ಣರಾಯನ ಸಭಾ ಪ್ರವೇಶವಂ ಮಾಡಿ ಸಾಷ್ಟಾಂಗದಿಂದೆರಗಿ ಕರಯುಗ್ಮಮಂ ಮುಗಿದೇನೆಂದು ಬಿನ್ನಹವಂ ಮಾಡುತಿರ್ದನು.—

ದ್ವಿಪದಿ —

ಬಹು ಪರಾಕು ಮುಕುಂದ ಪದ್ಮ ಪತ್ರಾಕ್ಷ
ಬಹುಗುಣ ಪರಿಪೂರ್ಣ ಭಕ್ತ ಲೋಕೇಶ ೧

ಅವಧಾರು ವಿಜ್ಞಾಪನವನೋರ್ವ ಭೂಸುರನು
ಕುವಲಯಾಧೀಶ ಕುಚೇಲ ನಾಮಗಡ ೨

ಸಾಂದೀಪರಾದ ಸದ್ಗುರುಗಳ ಗೃಹದಿ
ಒಂದಾಗಿ ಸಕಲ ವಿದ್ಯಾಭ್ಯಾಸಗಡ ೩

ಶ್ರೀಪಾದ ಸಖಗಡ ಶ್ರೀಚರಣ ಭಕ್ತಗಡ
ದೀಪಿತಾಂಘ್ರಿ ಸರೋಜ ದರುಶನಾಪೇಕ್ಷ ೪

ದೀಕ್ಷಾಧುರಂಧರ ದೀನಾತ್ಮಗಡೆ
ರಾಕ್ಷಸಲೋಕ ವಿದ್ರಾವಣ ನಿಪುಣ ೫

ಎನ್ನಯ ಬರವಿದೆಂದು ಬಿನ್ನಹಂ ಗೈಯೆ
ನನ್ನಿಯಿಂದಟ್ಟಿದನೆನ್ನ ಭೂಸುರನು ೬

ದ್ವಾರಾಗ್ರ ಭಾಗದೋಳ್ ತಾನಿರ್ಪನೀಗ
ಶ್ರೀ ರುಕ್ಮಿಣೀನಾಥ ಚಿತ್ತೈಸೆನುತಲಿ ೭

ವಿಜ್ಞಾಪನಂ ಗೈಯೆ ವೇತ್ರ ಹಸ್ತನನುಂ
ಅಜ್ಞಾನಿ, ಮೂಢಾತ್ಮ, ಸಖೋತ್ತಮನನು ೮
ನಿಲ್ಲಿಸಿ ಬರಬಹುದೆ ನೀತಿಯೆ ನಿನಗೆ
ಒಲ್ಲಿದನಾದ ಮತ್ಪ್ರಾಣ ಮಿತ್ರಕನ ೯

ತಡೆಯದೆ ತಾರೆಂದು ದಯದಿಂದ ನುಡಿಯೆ
ಒಡೆಯನಾಜ್ಞೆಯನವಂ ಪಡೆದು ವೇಗದಲಿ ೧೦
ಬಂದು ಚಿತ್ತೈಸೆನಲ್ ಬ್ರಾಹ್ಮಣೋತ್ತಮನು
ಇಂದಿರೇಶನ ಕಾಣಲೆನಗಾಯ್ತು ಪುಣ್ಯ ೧೧
ಎಂದು ತನ್ಮನದೊಳಾನಂದವನು ತಾಳಿ
ವಂದಿಸುತಲಡಿಗಡಿಗೆ ಆನಂದದಿಂದ ೧೨

ಒಳಪೊಕ್ಕು ಪೋಗಿ ಉಜ್ವಲ ಸಭಾಸದನ
ದೊಳಗಿರ್ದ ಶ್ರೀಕೃಷ್ಣ ನಳಿನಲೋಚನನ ೧೩
ಕಂಡನೀ ಭೂಸುರನು ಕರುಣಾ ಸಮುದ್ರ
ಕಂಡನಿಂ ವಿಪ್ರನನು ಕೌತುಕಮಿದೆನಲು ೧೪

ತ್ರಿಪದಿ:—

ಅನುಪಮಿತ ಅಪ್ರಾಕೃತಾದ್ಭುತ
ಕನಕ ನವಮಣಿ ಖಚಿತ ಶೋಭಿತ
ಘನತರಾ ಸಭೆ ಮಧ್ಯೆ ಸಿಂಹಾಸನದಿ ಮುದದಿ ೧

ನೀಲವರ್ಣ ನವೀನ ತುಲಸೀ
ಮಾಲ ವನಮಾಲಾದಿ ಭೂಷಣ
ನೋಲಗದ ಶ್ರೀಕೃಷ್ಣನೆಸೆದನು ಲೀಲೆಯಿಂದ ೨

ಭೀಷ್ಮನಂದನೆಯಾದ ರುಕ್ಮಿಣಿ
ವಾಮಭಾಗ ನಿಜಾಂಕಸೀಮಾ
ಧಾಮಳಾಗಿರೆ ಪರಮ ಹರುಷೋದ್ಭಾಸದಿಂದ ೩

ಬಲದ ಭಾಗದಿ ಬ್ರಹ್ಮ ಮುಖಸುರ
ರುಲಿಯೆ ಯದುನಂದನರು ವಾಮದಿ
ಕುಳಿತಿರಲು ಮುಂಗಡೆಯ ಋಷಿ ಮುನಿಕುಲ ವಿಭವದಿ ೪

ವಿವಿಧ ವಿನಿಯೋಗಾತಿಶಯದಲಿ
ಭುವನ ಮೋಹನ ಕೃಷ್ಣರಾಯನ
ಪ್ರವಿಮಲದ ಭವನವನು ಕಂಡನು ಭಕ್ತನಾಗ ೨೪

ವಚನ —

ಈ ಪ್ರಕಾರದಿಂದ ಪರಮಾತ್ಮನಾದ ಶ್ರೀಕೃಷ್ಣನು ಸಿಂಹಾಸನದಿ ಕುಳಿತಿರ್ದು ಎದುರಾಗಿ ಬರುವ ಕುಚೇಲನಂ ಕಂಡು ಪರಮ ಸಂತೋಷ ದಿಂದ ಅಂಕದಲ್ಲಿರುವ ರುಕ್ಮಿಣಿಯಂ ತೊಲಗಿಸಿ ಸಿಂಹಾಸನವನ್ನಿಳಿದು ಎದು ರಾಗಿ ಬರುತಿರ್ಪ ಪರಮ ಪುರುಷನ ಪ್ರತ್ಯಕ್ಷ ರೂಪಮಂ ನಿರೀಕ್ಷಿಸಿ ಭಯ ಭಕ್ತಿ ಯುಕ್ತನಾಗಿ ವೇದೋಕ್ತ ಪ್ರಕಾರದಿಂದ ಸ್ತೋತ್ರವಂ ಮಾಡುತಿ ರ್ದನದೆಂತೆನೆ.—

ಶ್ಲೋಕ:—

ಕ್ಷೀರವಾರಿಧಿ ನಿವಾಸ ಶ್ರೀರಮಾನುತವಿಲಾಸ
ಸಾರಸದಳನೇತ್ರ ಸನ್ಮುನಿಸ್ತೋತ್ರ ಪಾತ್ರ
ಕಾರಣ ಗುರುರೂಪ ಕಂಸಗರ್ವಾಂಧದೀಪ
ಭಾರತ-ಕುಲಜೀವ ಪಾಹಿಮಾಂ ಶ್ರೀಕೃಷ್ಣದೇವ

ರಾಗ ಶಂಕರಾಭರಣ ಅಟತಾಳ

ಕಂಡೆನು ಶ್ರೀಕೃಷ್ಣನ ಕಂಡೆನು ಪ.
ಕಂಡೆನನಂತ ಬ್ರಹ್ಮಾಂಡ ಸಂರಕ್ಷನ
ಪುಂಡರೀಕಾಕ್ಷನ ಪಾಂಡವ ಪಕ್ಷನ ಅ.

ಅರಬಿರಿದರುಣ ಸಾರಸವ ಮೃದು
ತರ ತಳಿರುಗಳ ಸರಸವ ಗೆಲ್ವ
ಶರಣರಿಗತಿ ಶುಭಕರವ ನೀವ

ಕಿರುಗೆಜ್ಜೆ ಕಡಗ ಭಾಸುರ ಸರಪಣಿಗಳಾ
ಭರಣದಿಂದೆಸೆವ ಶ್ರೀಚರಣ ಯುಗ್ಮಂಗಳ ೧

ಪೊಳೆವ ಪ್ರವಾಳಲತೆಗಳ ನಿಂದೆ
ಗೊಳಿಪ ಪಜ್ಜೆಗಳಂಗುಳಿಗಳ ತಾರೆ
ಗಳ ಹೊಳಪುಳ್ಳ ಥಾಳಗಳ ಪೋಲ್ವ
ಇಳೆಯೊಳಗ್ಗಳ ಭವಗಳ ಕಳವಳಗಳ
ಕಳೆವ ಗಂಗೆಯುಪೆತ್ತುಜ್ವಲ ನಖಾವಳಿಗಳ ೨

ಅಂಕುಶ ಧ್ವಜವಜ್ರ ರೇಖ ಗಂಧ
ಪಂಕ ಶ್ರೀಗೈದಭಿಷೇಕ ಕುಚ
ಕುಂಕುಮಾಂಕಿತ ಶುಭಾನೀಕ ವೀವ
ಪೊಂಕದ ಗರುಡನ ಬಿಂಕದ ಹೆಗಲೊಳ
ಲಂಕಾರವಾದಕಳಂಕ ಪಾದತಳವ ೩

ಬಾಗಿಸೆ ಶಿರವ ಕೂರ್ಮಗಳ ಗೆಲ್ವ
ಮೇಗಾಲುಗಳ ಸೊಗಸುಗಳ ನವ್ಯ
ವೋಗದಂತಿಹ ಹರಡುಗಳ ಬಂದು
ತಾಗಿದ ದನುಜರ ಬೇಗದಿಂದಲಿ ಗೆಲಿ
ದಾಗ ತಾಳಿದ ಗಂಡು ಪೆಂಡ್ಯದ ಬಿರುದಿನ ೪

ಸ್ಮರಕಾರ ಕಹಳೆ ಯುಗ್ಮಗಳ ಜಲ
ಚರಗಳ ದೇಹಭಾವಗಳ ಗೆಲ್ವ
ನಿರುಪಮ ಜಾನುದ್ವಯುಗಳ ಪೋಲ್ವ
ಉರುಟು ಕದಳಿ ಮರ ಕರಿಕರಗಳ ಸೋಂಕಿ
ದಿರವ ನೇಡಿಪ ಪೀವರದ ತೊಡೆಗಳನು

ಕ್ಷಿತಿಚಕ್ರ ಸೈಕತಾದಿಗಳ ತಿರ
ಸ್ಕೃತವ ಮಾಡುವ ಜಘನಗಳ ಭೃಗು
ಪತಿ ನಾಭ ಸೂಕ್ಷ್ಮವಸ್ತುಗಳ ಸೋಲ್ವ
ಅತುಲಿತ ಕಟಿತಟ ಪ್ರತಿರಾಹುತದ್ಯುತ
ದ್ಯುತಿಯುತ ಹೇಮನಿರ್ಮಲ ಪೀತವಸನವ ೬

ಕಾಳಾಹಿ ಸುತರ ಸೋಲಿಸುವ ಸತ್ಪಿ
ಪೀಲಿಕಾವಳಿಗಳ ನಗುವ ದಿವ್ಯ
ನೀಲಮಾಣಿಕ ಸಾಲಪೊಳೆವ ಸುರ
ರಾಲಯಮಾದ ಸದಾ ಲಲಿತಾನ್ವಿತ
ಲಾಲಿತವಹ ರೋಮರಾಜಿಯ ಬೆಡಗಿನ ೭

ಪಾನೀಯದೆಳೆ ಸುಳಿಯಿಂದ ಅತಿ
ಮಾನಿತ ಗಂಭೀರದಿಂದ ವರ
ನಾನಾ ಚರಾಚರ ವೃಂದವ ನಿ
ಧಾನಿಸಿ ಸೃಜಿಪ ನವೀನ ಚತುರ ಚತು
ರಾನನ ಜನಿತ ನಾಭೀ ನಳಿನವನೀಗ ೮

ನಳಿನ ಕಿಂದತಿ,ಮೃದುತರವು, ವಾಲಿ
ದಳಕಿಂದಧಿಕ ಶುಭಕರವು ತೆರೆ
ಗಳ ಪೋಲ್ವ ತ್ರಿವಳಿ ಬಂಧುರವು ಭವ್ಯ
ನಳಿನಜಾಂಡ ಕೋಟಿಗಳ ತನ್ನೊಳಗಿಟ್ಟು
ಪೊಳೆಯುತಲಿರುತಿಹ ಪೊಳೆವ ಮೇಲುದರಸ್ನ ೯

ಆಲೋಲವನಮಾಲೆ ಧರಿಸಿ ತುಲ
ಸೀ ಲಲಿತದ ಸರವೆರೆಸಿ ಕೌಸ್ತು
ಭಾಲಂಕೃತವನಳವಡಿಸಿ ರುಚಿ
ರಾಲಯ ಶ್ರೀವತ್ಸವೈಜಯಂತಿಯುತ
ಶ್ರೀ ಲಕ್ಷ್ಮಿಯುದರ ವಿಶಾಲವಕ್ಷವನೀಗ ೧೦

ನಿರುಪಮವಾದ ಹಸ್ತಗಳು, ನಾಲ್ಕು
ವರಗಜ ಹಸ್ತ ಬಾಹುಗಳು ಚಾರು
ತರಮಣಿ ಕನಕ ಯುಕ್ತಗಳು ರತ್ನ
ದೆರಕದ ಭುಜಕೀರ್ತಿ ಸರಪಣಿ ಕಡಗವು
ಬಿರುದಿನ ಕಂಕಣ ವರಮಣಿ ಬಂಧಗಳ್ ೧೧

ಪೊಳೆವ ಮೂರೇಖೆಯ ಚಂದ ಲಕ್ಷ್ಮಿ
ಯೊಲಿದು ಪೂಸಿದ ದಿವ್ಯ ಗಂಧ ಹೊಳೆ
ಹೊಳೆವ ಭೂಷಣಂಗಳಿಂದ ಮಾದ
ಸುಲಲಿತ ಶಂಖವ ಗೆಲುವ ಸೊಬಗಿನಿಂದ
ಚೆಲುವಾದ ಮಂಗಳಗಳದ ಸಂಭ್ರಮವನ್ನು ೧೨

ವರಸುದರುಶನ ಪಂಕಜದ ರೇಖೆ
ಮೆರೆಸಿದ ಶುಭಕರತಲದ ಮೃದು
ತರ ತರುಣಾಬ್ಜ ಪಲ್ಲವದ ಕಾಂತಿ
ಭರಿತ ಪೊನ್ನುಂಗುರ ಬೆರಳು ಸೆಳ್ಳುಗುರ್ಗಳ
ವರಶಂಖ ಚಕ್ರ ಪಂಕರುಹಗದಾದಿಗಳ್ ೧೩

ಪಡಿಯಿಲ್ಲ ಚುಬುಕಾಗ್ರನ್ಯಾರ ಚೆಲ್ವ
ಕುಡಿಮಿಸೆಗಳ ಶೃಂಗಾರ ಬರೆ
ದಡೆ ಬಾರದಿಹ ಶ್ರೀಕಾರ ಕರ್ಣ
ದೊಡನೆ ಮಾತಾಡುವೆರಡು ರತ್ನಕುಂಡಲ
ದೆಡೆಯ ಕಪೋಲದ ಬೆಡಗಿನ ಬೆಡಗನ ೧೪

ಮರಳಿಮಾಡಿದ ಪುಣ್ಯನಿಧಿಯೊ ನಮ್ಮ
ಸಿರಿ ಲಕ್ಷ್ಮಿಯೊಂಟಿದ ಸುಧೆಯೊ ರುಚಿ
ಕರಗಳು ಜನಿಸಿದ ಮನೆಯೊ ಕೋಟಿ
ಅರುಣ ಕಿರಣದ ಲಹರಿಯ ಪ್ರವಾಳದ
ಪರಿಯನಿಂದಿಪ ಬಿಂಬಾಧರದ ವಿಲಾಸವ ೧೫

ಕುಂದ ಪಙ್ಕ್ತಿಯು ಪೋಲ್ವರದನ ಪೂರ್ಣ
ಚಂದಿರನನು ಗೆಲ್ವವದನ ಮಂದ
ಮಂದಸ್ಮಿತಗಳಿಗೆ ಸದನ ಗಿಳಿ
ವೃಂದವ ಕೋಕಿಲ ವೃಂದವನು ಮಕ
ರಂದ ಸುಧಾಬ್ಧಿಯ ನಿಂದಿಸಿ ನುಡಿವನ ೧೬

ತಿಲಕ ಸುಮದಗಂಧ ಪರಿಯ ನಾಗ
ಗೊಳಿಸುವ ನಾಸಿಕಪರಿಯ ಮುಕ್ತಾ
ಫಲದಲಂಕಾರದ ಸಿರಿಯ ಭವ್ಯ
ಜಲಚರಂಗಳ ನೈದಿಲೆಯ ಸಾರಂಗ ಚಂ
ಚಲ ಸೂರ್ಯಚಂದ್ರರ ಗೆಲುವ ಲೋಚನಗಳ ೧೭

ಸ್ಮರಧನು ಶೋಭಾಯಮಾನ ಸುರ
ವರ್ಧನ ಕಾರ್ಮುಕವ ಸಮಾನ ಚಿತ್ರ
ಬರೆಯಲರಿಯದುಪಮಾನ ಮಾಗಿ
ಇರುವ ಭ್ರೂಭಾಗದೋಳ್ ಬರಿ ಬಾಲಶಶಿಯಂತೆ
ಮೆರೆವ ಫಾಲದಲಿ ಕಸ್ತೂರಿಯ ನಾಮದ ಮುದ್ದು ೧೮

ನವಭೃಂಗಾಲಕದ ಲಲಾಟ ನವ್ಯ
ನವರತ್ನ ಖಚಿತ ಕಿರೀಟ ಕೋಟಿ
ರವಿಶಶಿಗಳ ಕಾಂತಿಕೂಟ ಕಣ್ಗ
ಳಿವೆ ಗೂಡ ನೀಕ್ಷಿಸೆ ಪ್ರವಿಮಲ ರುಚಿರಮು
ತ್ಸವದಿ ಶಿಖೆಯೊಳೊಪ್ಪುವ ಪುಷ್ಪ ಸಂಗಳ ೧೯

ಸರ್ವಾಂಗ ಸುಂದರ ಪೂರ್ಣ ನವ
ದೂರ್ವಾದಳ ಶ್ಯಾಮವರ್ಣ ಸುರ
ಸಾರ್ವಭೌಮಕ ಸುಪ್ರಸನ್ನನಾಗಿ
ದೂರ್ವಾರ ಕಂಸಾದಿ ಗರ್ವಿತರನು ಕೊಂದ
ಸರ್ವಸ್ವತಂತ್ರನ ಗೀರ್ವಾಣ ವಂದ್ಯನ ೨೦

ದೇವಕಿದೇವಿಯ ಪುತ್ರ ಪಾಂಡು
ಭೂವರತನುಜರ ಮಿತ್ರ ದುಷ್ಟ
ಕವುರವಾ (ಕೌರವಾ)ಟವಿ ವೀತಿಹೋತ್ರನಾಗಿ
ಪಾವನಭಕ್ತರ ಜೀವಮಿತ್ರನಾದ
ಶ್ರೀವರಖಾದ್ರಿನೃಸಿಂಹನ ರೂಪವ ೨೧

ಶ್ಲೋಕ —

ಜಯಜಯ ಕಮಲಾಕ್ಷ ಸರ್ವಲೋಕೈಕರಕ್ಷ
ಜಯ ವಿಬುಧವರೇಣ್ಯ ಸನ್ಮುನೀಶ್ವರ ಶರಣ್ಯ
ಜಯ ಕುರುಕುಲನಾಶ ಸಾರಸಾಪ್ತ ಪ್ರಕಾಶ
ಜಯ ಯದುಕುಲರಾಜ ಸಜ್ಜನಾಮರಮಹೀಜ

ರಾಗ ರೇಗುಪ್ತಿ ಆದಿತಾಳ

ದಯಮಾಡೊ ಶ್ರೀಕೃಷ್ಣ ದಯಮಾಡೊ ಪ

ದಯಮಾಡೋ ಜಯ ವಿಜಯ ಪ್ರಿಯ
ದಯಮಾಡೋ ಸನ್ಮುನಿ ಮೃದುಹೃದಯ ಅ.

ಶ್ರೀಶನೀ ಕ್ಷೀರಾಂಬುರಾಶಿ
ವಾಶಿಯಾಗಿರಲಾಗಿ ವಾ
ಗೀಶಾದ್ಯರು ಬಹು ಕ್ಲೇಶವನುಸುರಲ
ಧೀಶ ಲಾಲಿಸಿದೆ ಕೇಶವಮೂರ್ತಿ ೧

ಧಾರುಣಿ ಭಾರವ ಕಳೆವ
ಕಾರಣ ದೇವಕಿಯ ಕು
ಮಾರ ಯದುಕುಲೋದ್ಧಾರನಾಗಿಯವ
ತಾರವ ಧರಿಸಿದ ನಾರಾಯಣನೆ ೨

ಸಾಧು ವಸುದೇವ ದೇವ
ಕೀ ಧೈರ್ಯದೊಳಿರುವಂತೆ
ಬೋಧಿಸಿ ನಿಜರೂಪಾಧಿಕಾರರಿಗೆ
ಸಾಧಿಸಿ ತೋರಿದ ಮಾಧವರಾಯ ೩

ಕಂದನಾಗಿ ವಸುದೇವ
ನಿಂದ ಯಮುನೆಯ ದಾಂಟಿ
ಬಂದು ಗೋಕುಲದಿ ನಿಂದು ಯಶೋದಾ
ನಂದನನಾದ ಮುಕುಂದ ಗೋವಿಂದ ೪

ವೃಷ್ಣೀರು ತೊಟ್ಟಿಲೊಳಿಟ್ಟು
ಕೃಷ್ಣ ಜೋಯೆಂದು ಪಾಡಿದರು
ಜಿಷ್ಣುವಿನುತ ವರ್ಧಿಷ್ಣು ಗರಿಷ್ಣು ಸ
ಹಿಷ್ಣು ಸದಾಪ್ರಭ ವಿಷ್ಣು ವಿಷ್ಣುವೆ ೫

ವಧುವಾಗಿ ಪೂತನಿ ಬಂದು
ಅಧಿಕ ವಿಷದ ಮೊಲೆಯುಣಿಸೆ
ವಿಧವನರಿದವಳ ವಧಿಸಿ ಶಕಟನುರೆ
ನಿಧನವಗೊಳಿಸಿದ ಮಧುಸೂದನನೆ ೬

ವಕ್ರಿಪ ತೃಣಾವರ್ತನ
ವಿಕ್ರಮವ ಗೆಲಿದು ನೀ ಬಾ
ಲಕ್ರೀಡೆಯೊಳು ತಕ್ರದಧಿಘೃತ
ವಾಕ್ರಮಿಸಿದೆಯೊ ತ್ರಿವಿಕ್ರಮದೇವ ೭

ಸೋಮನ ಪಣ್ಣೆಂದು ಪಿಡಿದು
ನೀ ಮಣ್ಣ ಮೆದ್ದು ತಾಯಿಗೆ
ಪ್ರೇಮದಿ ತ್ರಿಭುವನ ಧಾಮವ ಬಾಯೊಳು
ಕಾಮಿಸಿ ತೋರಿದ ವಾಮನ ಮೂರ್ತಿ ೮

ದುರುಳತನವ ಕಂಡು ನಿನ್ನ
ನರಸಿ ಒರಳಿಗೆ ಬಂಧಿಸೆ
ಒರಳಲಿ ಮತ್ತಿಯ ಮರನ ಕೆಡಹಿ ಗಾಂ
ಧರುವರ ಶಾಪವಪರಿದ ಶ್ರೀಧರನೆ ೯

ಭಾಸುರ ಬೃಂದಾವನವ
ನೀಸೇರ್ದೆವತ್ಸಬಕನ ಅ
ಘಾಸುರ ಮೊದಲಾದಾಸುರಕೋಟಿಯ
ನಾಶಗೈದ ಹೃಷಿಕೇಶ ರಮೇಶ ೧೦

ಪದ್ಮಾಕ್ಷ ಗೋಪಗೋರೂಪ
ಪದ್ಮಜಗಾಗಿ ನೀ ಧರಿಸಿ
ಪದ್ಮರ ವರಹೃತ್ಪದ್ಮವನೊಲಿಸಿದೆ
ಪದ್ಮಭವ ಸ್ತುತ ಪದ್ಮನಾಭನೆ ೧೧

ತರಿದುಧೇನುಕನಕಾಳಿ
ಉರಗನ ಗರ್ವಬಿಡಿಸಿ
ಉರಿಯನುಂಗಿ ಬಲನಿಂದ ಪ್ರಲಂಬಾ
ಸುರವನು ಕೊಲಿಸಿದ ವರದಾಮೋದರ ೧೨

ತರುಣೀರ ವಸ್ತ್ರಗಳಪ
ಹರಿಸಿ ಯಜ್ಞಾನ್ನವನುಂಡು
ಗಿರಿಯನೆತ್ತಿ ಕುಪಿತ ವರುಣಾಲಯದೊಳ
ಗಿರಲು ತಂದ ಸಂಕರುಷಣ ಶೌರಿ ೧೩

ದಾಸರಾದ ಗೋಪರಿಗೆ
ಭಾಸುರ ವೈಕುಂಠವ ತೋರಿ
ರಾಸಕ್ರೀಡಾಯಾಸದ ಸತಿಯರ
ಲೇಸೆನೆ ಸಲಹಿದ ವಾಸುದೇವನೆ ೧೪

ವಿದ್ಯಾಧರನಿಗೆ ಮೋಕ್ಷ
ಹೃದ್ಯದಿಂದಲಿತ್ತು ನೀನಾ
ಭೇದ್ಯ ವೃಷಾಸುರವಧ್ಯ ಕೇಶಿಯರ
ವಧ್ಯರ ಮಾಡಿದ ಪ್ರದ್ಯುಮ್ನನೆ ನೀ ೧೫

ಧನುವಿನ ಹಬ್ಬಕೆ ಮಧುರೆ
ಗಿನಿತು ಬರುತಲಕ್ರೂರನಿಗೆ
ಘನವಿಶ್ವಾತ್ಮಕ ಚಿನುಮಯ ರೂಪವ
ವನಧಿಯೋಳ್ ತೋರಿದ ಅನಿರುದ್ಧನೆ ನೀ ೧೬

ವರೆಸಿ ರಜಕನ ಕುಬ್ಜೆಯನಂದ
ವರಿಸಿ ಬಿಲ್ಲುಮುರಿದು ಮತ್ತ
ಕರಿಯು ಗೆಲಿದು ಮಲ್ಲರ ಮರ್ದಿಸಿ ಸಂ
ಹರಿಸಿದೆ ಕಂಸನ ಪುರುಷೋತ್ತಮನೆ ೧೭

ರಕ್ಷಿಸಿ ಉಗ್ರಸೇನನ
ಪೇಕ್ಷೆಯಿಂ ತಂದೆತಾಯ್ಗಳ
ತತ್ಕ್ಷಣ ಬಂಧವಿಮೋಕ್ಷರ ಮಾಡಿದ
ಪಕ್ಷಿವಾಹನಾಧೋಕ್ಷಜ ರಂಗ ೧೮

ಗುರುವಾದ ಸಾಂದೀಪರಲ್ಲಿ
ವರವಿದ್ಯಾಭ್ಯಾಸವ ಮಾಡಿ
ಜರೆಯ ಮಗನ ಸಂಗರದಿ ಶೃಗಾಲನ
ಪರಿಭವಗೊಳಿಸಿದೆ ನರಸಿಂಹನೆ ನೀ ೧೯

ಅತುಲ ಮುಚುಕುಂದನಿಂದ
ಹತವಗೊಳಿಸಿ ಕಾಲಯವನನ
ಮಥಿಸಿ ನೃಪರಸಂತತಿಯ ರುಕ್ಮಿಣಿಗೆ
ಪತಿಯಾದೆಲೆ ಅಚ್ಯುತ ಪರಮೇಶ ೨೦

ವರ್ಧಿಸಿ ಘಂಟಾಕರ್ಣನ
ಮರ್ದಿಸಿ ಪೌಂಡ್ರಕಾಖ್ಯನ
ಸಾಧ್ವಿ ಸತ್ಯಭಾಮಾದ್ಯರನಾಳಿದ
ಹೃದ್ಯಮೂರ್ತಿ ಜನಾರ್ದನದೇವ ೨೧

ಮುರನರಕರ ಸಂಹರಿ
ನೆರಡೆಂಟು ಸಾಸಿರ ಸ್ತ್ರೀ
ಯರ ಪರಿಣಯಗೈದುರುತೋಷದೊಳು
ಸುರ ಕುಸುಮವನಪಹರಿಸಿದುಪೇಂದ್ರ ೨೨

ಸುರಮುನಿಗೆ ವಿಶ್ವರೂಪವ
ನೆರೆದೋರಿ ದಂತವಕ್ತ್ರ
ಸುರಶಿಶುಪಾಲರ ತರಿದು ಬಾಣನನು
ಕರಗಳನುರೆ ಸಂಹರಿಸಿದ ಹರಿಯೆ ೨೩

ಹರಗಾಗಿ ಸ್ತ್ರೀಯಾಗಿ ಭಸ್ಮಾ
ಸುರನ ಗೆಲಿದು ಭೃಗುವಿಗೊಲಿದು
ನರನಿಗೆ ಸಾರಥಿ ಹರುಷದೊಳಾಗಿಯೆ
ತುರಗವ ನಡೆಸಿದ ಸುರವರ ಕೃಷ್ಣ ೨೪

ಏನೆಂದು ಬಣ್ಣಿಪೆ ನಿನ್ನ
ವಾಸುಕೀಶನಿಗಭೇದ್ಯ
ವಾಸವನುತ ವರವಾಸುದೇವ ಶ್ರೀನಿ
ವಾಸ ಖಾದ್ರಿಪುರೀಶ ನೃಸಿಂಹ ೨೫

ಶ್ಲೋಕ:—

ಅಂಡಜವರವಾಹಾ ಆರ್ತರಕ್ಷೈಕಬಾಹ
ದಂಡಿತ ರಿಪುವೃಂದಾ ಧರ್ಮಪಾಲನ ಮುಕುಂದಾ
ಖಂಡಿತ ದಿತಿಜಾತಾ ಕಾಮಿತಾರ್ಥಪ್ರದಾತಾ
ಪಾಂಡವ ಪರಿಪೋಷಾ ಪಾಹಿಮಾಂ ಗೋಪವೇಷಾ

ರಾಗ ಕಲ್ಯಾಣಿ ಆದಿತಾಳ

ಕೃಷ್ಣಾ ಪಾಹಿಮಾಂ ರಾಮ
  ಕೃಷ್ಣಾ ಪಾಹಿಮಾಂ ಪ.

ಕೃಷ್ಣ ಪಾಹಿ ವರವೃಷ್ಣಿ ಕುಲೋದ್ಭವ
ಜಿಷ್ಣುವಿನುತ್ತ್ವವರ್ಧಿಷ್ಣುಗರಿಷ್ಣು ಅ.

ಮಾರಜನಕ ಸುಕುಮಾರ ಶರೀರ ಕು
ಮಾರಜನಕನುತ ಮಾರಮುಖಾಬ್ಜ ಕು
ಮಾರಪಿತಾ ಮಹಸಾರಸನಾಭೋ
ದ್ಧಾರ ಸಕಲಗುಣ ಪೂರಕಯಮುನಾ
ತೀರ ಕುಂಜಕುಟೀರ ಮಧ್ಯ ಸಂ
ಚಾರ ಚರಣಗೋಕ್ಷೀರಸಾರದಧಿ
ಚೋರನಿಖಿಲ ಶೃಂಗಾರ ಗೋಕುಲಾ
ಗಾರ ಭಕ್ತಮಂದಾರ ಸಿಂಧು ಗಂ
ಭೀರಜಗತ್ತ್ರಯಕಾರಣರೂಪ ಸ
ಮೀರಣಜಸ್ತುತ ವಾರಣದುರಿತನಿವಾರಣ ಶೌರೆ ೧

ಕುಂದರದನ ಮುಚುಕುಂದವರದ ಮು
ಕುಂದ ಮುಕ್ತಜನ ಬೃಂದಾಲಯ ಗೋ
ವಿಂದ ಗೋಕುಲಾನಂದ ಯಶೋದಾ
ನಂದ ಸನಕಸನಂದನವಂದ್ಯ ಪು
ರಂದರಾದಿ ಸುರ ಸಂದೋಹ ಪ್ರಿಯ
ಮಂದರಧರ ಮಕರಂದ ವಚನ ಬಾ
ಲೇಂದುಫಾಲ ಕುರುವಿಂದಾಧರ ಸಂ
ಕ್ರಂದನತನಯ ಸ್ಯಂದನಪಾಲನ
ಮಂದಹಾಸ ಬಹುಸುಂದರ ಪರಮಾ
ನಂದಭರಿತವರನಂದ ಕಂಧರಕರ ನಂದಕುಮಾರ ೨

ಹೇಮವಸನ ಶುಭನಾಮಧೇಯ ಸಂ
ಗ್ರಾಮಧುರೀಣ ಸುಧಾಮ ಸನ್ಮನ
ಕಾಮಿತದಾಯಕ ಪ್ರೇಮಾನ್ವಿತಬಲ
ರಾಮಾನುಜ ಬಲಭೀಮ ವಿಕ್ರಮೋ
ದ್ದಾಮ ಸುರೌಘಫಲಲಾಮ ಕೈರವದಳ
ಶ್ಯಾಮ ಭವಭಯವಿರಾಮ ತ್ರಿಜಗಭಿ
ರಾಮ ರಾಮನಿಸ್ಸೀಮ ಕೌರವ
ಸ್ತೋಮ ವಿನಾಶನಸೋಮ ಸಮಾನನ
ತಾಮರಸನಯನ ಕೋಮಲರೂಪ ಮ
ಹಾಮಹಿಮೋಜ್ವಲ ಶ್ರೀಮನ್ಮಂಗಳಧಾಮ ಸಂತತ ೩

ರಂಗನಾಯಕ ವಿಹಂಗವಾಹನ ಭು
ಜಂಗಶಯನ ರುಕ್ಮಾಂಗದವರದ ರ
ಥಾಂಗಹಸ್ತ ಗೋಪಾಂಗನಾ ಕುಚಾ
ಲಿಂಗನ ನಿಪುಣ ತುರಂಗವದನ ಭವ
ಭಂಗ ಸತ್ಕೃಪಾಪಾಂಗ ದಿವೌಕಸ
ಸಂಘ ದೈತ್ಯಜನಸಂಘ ತಿಮಿರಪ
ತಂಗ ನೀರದನಿಭಾಂಗ ಹೇಮಸಾ
ರಂಗವಿದಳನ ಕುರಂಗಧರಾನ್ವಯ
ಪುಂಗವ ಕೀರ್ತಿತರಂಗ ನಿರುಪಮೋ
ತ್ತುಂಗ ಚತುರ್ಭುಜ ಶೃಂಗಾರಪ್ರಿಯ ಗಂಗಾಜನಕ ೪

ಶ್ರೀನಿವಾಸ ಮುರಳೀನಿನದಪ್ರಿಯ
ದೀನಜನಾವನ ದಾನವಗಜಪಂ
ಚಾನನ ನಾರದಗಾನಲೋಲ ಉಪ
ಮಾನ ಚತುರ ಚತುರಾನನ ಭಕ್ತಾ
ಧೀನ ತವಪದಧ್ಯಾನನಿರತ ಸು
ಜ್ಞಾನಭರಿತ ಸುಜನಾನುಕೂಲ ಕಲಿ

ಕಾನನದಹನ ಕೃಶಾನುರೂಪ ಪವ
ಮಾನ ಸುತಾಂಬುಜ ಭಾನುಬಿಂಬ ನಿಜ
ಮೌನಿವರ್ಯ ಶುಭಮಾನಸಾಂಬುಜ
ಸ್ಥಾನನಿವಾಸ ಶ್ರೀನರಸಿಂಹ ನಮೋ ನಮೋ ನಮಃ ೫

ಶ್ಲೋಕ:—

ಜಲಧರನಿಭಗಾತ್ರ ಸನ್ಮುನಿಸ್ತೋತ್ರಪಾತ್ರ
ಮದಹರ ಕನಕಾಕ್ಷ ವೇದವೇದ್ಯಾಂಬುಜಾಕ್ಷ
ಭಾರತಕುಲದೀಪ ಪುಂಡರೀಕಾಕ್ಷ ಭೂಪ
ಲಲಿತಸುಗುಣಸಾಂದ್ರ ರಕ್ಷಮಾಂ ಯಾದವೇಂದ್ರ

ರಾಗ ಶ್ರೀರಾಗ ಛಾಪುತಾಳ

ನಿನ್ನ ನಿಷ್ಟು ಬೇಡುವೆನೊ ರಂಗಯ್ಯ ಪ.
ಜನ್ಮಜನ್ಮಾಂತರದಲಿದಕೊಡು ಕಂಡ್ಯ ಹರಿಯೆ ಅ. ಪ.
ಎನ್ನ ಶಿರವು ನಿನ್ನ ಚರಣಂಗಳಿಗೆರಗಲಿ
ಉನ್ನಂತ ನಿರ್ಮಾಲ್ಯವ ಮುಡಿಯಲಿ
ಸನ್ನುತ ಊರ್ಧ್ವಪುಂಡ್ರವಪಣೆ ಧರಿಸಲಿ
ಕಣ್ಣು ನಿನ್ನಯ ಮೂರ್ತಿನೋಡಲಿ ದೇವ ೧

ನಾಸಿಕ ನಿನ್ನ ಗಂಧ ಮೂಸಿನೋಡಲಿ ಜಿಹ್ವೆ
ಲೇಸಾಗಿಬಂದು ನಿನ್ನನು ಪಾಡಲಿ
ವಾಸಲಾಗಿ ಎನ್ನಯ ಕಿವಿಗಳು ನಿನ್ನ
ಭಾಸುರ ಚರಿತೆಗಳನು ಕೇಳಲಿ ಹರಿ ೨

ಧರಿಸಲಿ ಗಳವು ತುಳಸಿಯ ಮಣಿಮಾಲೆಯ
ಕರಗಳು ನಿನ್ನ ಪೂಜೆಯ ಮಾಡಲಿ
ವರಬಾಹುಗಳು ಶಂಖಚಕ್ರದಿ ಪೊಳೆಯಲಿ
ಮರೆಯದೆ ನಿನ್ನ ಸೇವೆಯಗೈಯಲಿ ಶೌರಿ ೩

ಎದೆಯು ದ್ವಾದಶನಾಮಗಳಿಂದ ಪೊಳೆಯಲಿ
ಉದರಪ್ರಸಾದವನುಣುತಿರಲಿ
ಬದಿ ನಿನ್ನ ಪಾದರಜದಿ ನಿತ್ಯಪೊರಳಲಿ
ಪದಗಳು ನಿನ್ನಯಾತ್ರೆಯಮಾಡಲಿ ಸ್ವಾಮಿ ೪

ಮನವು ನಿನ್ನಯಮೂರ್ತಿ ಧ್ಯಾನವಮಾಡಲಿ
ಅನುಗಾಲವು ನಿನ್ನನು ಭಜಿಸಲಿ
ಘನಸಂಸಾರದ ವಿಷಯವ ಮರೆಯಲಿ
ಅನುಪಮ ಸಾಧುಸಂಗವ ಬಯಸಲಿ ಹರಿ ೫

ಸರ್ವಾಂಗ ನಿನಗೆ ಸಾಷ್ಟಾಂಗವನೆರಗಲಿ
ಸರ್ವೇಂದ್ರಿಯವು ನಿನಗೊಂದಿಸಲಿ
ಸರ್ವತತ್ವಂಗಳು ನಿನ್ನನೆ ಪೊಗಳಲಿ
ಸರ್ವ ನಿನಗೆ ಸಮರ್ಪಣೆಯಾಗಲಿ ದೇವ ೬

ಧನಧಾನ್ಯ ಭೋಗಭಾಗ್ಯವ ಕೇಳಲಿಲ್ಲವೋ
ಹಣಮುಟ್ಟದ ಸೋಪಸ್ಕರಗಳವು
ಘನ ಭಕ್ತವತ್ಸಲನೆಂದು ನಾ ಬೇಡಿದೆ
ಅನುಮಾನಿಸದೆ ಪಾಲಿಸೆನಗೆ ಶ್ರೀನರಸಿಂಹ ೭

ಶ್ಲೋಕ :—

ಅಗಣಿತಗುಣಧಾಮ ಆಪ್ತಭೂಪೂರ್ಣಕಾಮ
ಅಸುರ ಕುಲವಿನಾಶ ಆಶ್ರಿತಾಘೌಘನಾಶ
ದಿವಿಜರಿಪುವಿಭಂಗ ದೀನಮಂದಾರ ರಂಗ
ಭವಹರಪರಮೇಶ ಪಾಹಿಮಾಂ ರುಕ್ಮಿಣೀಶ

ಸೀಸಪದ್ಯ :—

ಗಾಧಿಪುತ್ರನ ಯಜ್ಞ ಗೌತಮಋಷಿ ಪತ್ನಿ
ಪಿತೃವಾಕ್ಯ ಹನುಮಂತ ಭೀಮ ರವಿಜ

ಅಂಗದ ಪಾರ್ಥ ವಿಭೀಷಣ ಅಜಾಮಿಳ
ಅಂಬರೀಷ ಗಜೇಂದ್ರ ರುಕ್ಮಾಂಗದ
ಪ್ರಹ್ಲಾದ ನಾರದ ಪಾಂಡವ ಪಾಂಚಾಲಿ
ಬಲಿ ಭೀಷ್ಮ ಉತ್ತಾನಪಾದಿ ವಿದುರ
ಅಕ್ರೂರ ಮುಚುಕುಂದ ಶಕ್ರ ಜಟಾಯು ವಾ
ನರಸೈನ್ಯ ಗೋದ್ವಿಜ ಸುರಕದಂಬ
ಮುಖ್ಯ ಸದ್ಭಕ್ತರನು ಸಲಹಿ ಮುದವನಾಂತು
ರಕ್ಷಿಸಿದರೀತಿ ಎನ್ನ ನೀ ರಕ್ಷಿಸೈಯ
ಸರಸಶುಭಕೀರ್ತಿ ದೇವತಾಚಕ್ರವರ್ತಿ
ವಿಷ್ಣು ವಿಸ್ಫೂರ್ತಿ ಪರಮಾತ್ಮ ಶ್ರೀಕೃಷ್ಣಮೂರ್ತಿ

ವಚನ:—

ಈ ಪ್ರಕಾರದಿಂದ ಸ್ತೋತ್ರವಂ ಮಾಡುತ್ತ ಅಡಿಗಡಿಗೆ ಸಾಷ್ಟಾಂಗ ದಂಡಪ್ರಣಾಮಂಗಳಂ ಗೈಯುತ್ತ ಬರುತ್ತಿರುವ ಕುಚೇಲನಿಗೆ ಪಾದಚಾರಿಯಾಗಿ ಎದುರಾಗಿ ಪೊರಮಟ್ಟು ಬಂದು ಬಲಭದ್ರನಂ ತಕ್ಕೈಸುವಂತೆ ಆಜಾನುಬಾಹುಗಳಿಂದ ಪಿಡಿದೆತ್ತಿ ಗಾಢಾಲಿಂಗನಂ ಗೈದು ಕರಲಾಘವದಿಂ ಕರೆತಂದು ನಿಜಾಸನಾಸೀನನಂ ಮಾಡಿಸಿ ತದನಂತರದೊಳೆಂತೆನೆ —

ದ್ವಿಪದಿ —

ಭಕ್ತವತ್ಸಲನಾದ ಪರಮಾತ್ಮನಾದ
ಮುಕ್ತಿದಾಯಕನಾದ ಮುನಿವಂದ್ಯನಾದ ೧
ಸಿರಿದೇವಿಪತಿಯಾದ ಶ್ರೀಕೃಷ್ಣದೇವ
ಸರಸಿಜಭವಭವಾದ್ಯರೋಲೈಸುತಿರಲು ೨
ಕ್ಷಿತಿಸುರನಂಘ್ರಿ ಪೂಜೆಯಮಾಡ ಬಯಸಿ
ರತಿಯುರ ಕಡೆಗಣ್ಣ ಸನ್ನೆಯಂ ಮಾಡೆ ೩
ಅಷ್ಟ ಮಹಾಲಕ್ಷ್ಮಿಯರವೋಲು ಮೆರೆವ
ಅಷ್ಟ ಮಹಿಷೇರು ಪೂರ್ಣಾನಂದದಿಂದ ೪

ರುಕ್ಮಕಲಶದೊಳಗಗ್ರೋದಕವನಾಂತು
ರುಕ್ಮಿಣಿ ನಿಂತಳಾರೂಢಭಕ್ತಿಯಲಿ ೫

ಭವ್ಯ ಜಾಂಬೂನದಾಂಬರ ಉತ್ತರೀಯ
ದಿವ್ಯ ಕಾಂಚನದ ಯಜ್ಞೋಪವೀತವನು ೬

ಅತ್ಯಂತ ಮುದದಿ ಹಸ್ತಾಬ್ಜದೊಳ್ ಪಿಡಿದು
ಸತ್ಯಭಾಮಾದೇವಿ ಸಮ್ಮುಖದೊಳ್ನಿಲಲು ೭

ಬಂಧುರ ಕಸ್ತೂರಿ ಪರಿಮಳಾನ್ವಿತದ
ಗಂಧಾಕ್ಷತೆಯ ಯುಗ್ಮಕರಸರೋರುಹದಿ ೮

ಧರಿಸಿ ಭಯಭಕ್ತಿಯಾದರ ಪೂರ್ವಕದಿಂದ
ತರುಣಿ ಜಾಂಬವತಿನಿಂದಳು ಮನೋಹರದಿ ೯

ಪಾರಿಜಾತ ತಮಾಲ ಪಾದರೀವಕುಳ
ಸೌರಭಾನ್ವಿತ ಪದ್ಮಚಾಂಪೇಯಮುಖ್ಯ ೧೦

ಕುಸುಮಗಳ್ ಕೇಯೂರ ಕಮನೀಯ ಹಾರ
ಪೊಸತಾದ ಕಟಿಸೂತ್ರ ಪೊನ್ನುಂಗುರಾದಿ ೧೧

ಮಣಿಗಣಾಭರಣಗಳ್ ಮಹಿತ ಸಂತಸದಿ
ಗಣನೆಯಿಲ್ಲದೆ ತಂದು ಕಾಳಿಂದಿ ಇಡಲು ೧೨

ಕಲಿತದಶಾಂಗ ಗುಗ್ಗುಲರಸದ ಆಮೋದ
ವಿಲಸಿತ ಸಾಂಬ್ರಾಣಿ ವಿಶ್ರುತಧೂಪ ೧೩

ದೀಪಿತರತ್ನ ಪ್ರಭಾಪೂರವಾದ
ದೀಪಪಂಜ್ತಿಗಳು ನೀಲಾದೇವಿ ತರಲು ೧೪

ಕ್ಷೀರಾಜ್ಯಲಾಜ ಮಿಶ್ರಿತದ ನೈವೇದ್ಯ
ಸಾರಸುಧಾಪೂಗ ಸಂಯುಕ್ತನಾಗ ೧೫

ವಲ್ಲಿ ಕರ್ಪೂರಾದಿ ಪವನಾನ್ವಿತದ
ಪಲ್ಲವ ತಾಂಬೂಲ ಪಾತ್ರೆಯಂ ಪಿಡಿದು ೧೬

ತರುಣೀಲಲಾಮೆ ಮಿತ್ರಾದೇವಿ ಬರಲು
ಕರಯುಗ್ಮಭರಿತ ಭಾಸುರರೂಪ ೧೭

ದಕ್ಷತೆಯನ್ನು ಭದ್ರಾದೇವಿ ಇಡಲು
ತತ್ಕ್ಷಣದಲಿ ತನ್ನ ಧಾಮದಿಂದಾಗ ೧೮

ನಿರುಪಮ ಕರ್ಪೂರ ನೀರಾಜನವನು
ಮರುಗ ಮಲ್ಲಿಗೆ ಜಾಜಿ ಮಂತ್ರ ಪುಷ್ಪವನು ೧೯

ಲಕ್ಷಣವತಿಯಾದ ಲಕ್ಷಣಾದೇವಿ
ಆಕ್ಷಣದಿ ತಂದಿಟ್ಟಳಬ್ಜಾಕ್ಷನೋಡೆ ೨೦

ಈ ಪರಿಯಲಿ ಷೋಡಶೋಪಚಾರಗಳ
ಗೀ ಪದಾರ್ಥಗಳನಿಂತು ತಂದಿಡಲು ೨೧

ಕಂಡು ಶ್ರೀಕೃಷ್ಣನುದ್ದಂಡ ಸಂಭ್ರಮದಿ
ಕೊಂಡಾಡಿ ಮನದಿ ರುಕ್ಮಿಣಿ ಮುಖ್ಯರುಗಳ ೨೨

ಸಿಂಹಾಸನದೊಳಿಹ ಕುಚೇಲನಂ ಮನುಜ
ಸಿಂಹನರ್ಚಿಸಲಾಗ ಸಿದ್ಧಾತ್ಮನಾದ ೨೩

ವಚನ —

ಇಂತು ಪೂಜಾ ದ್ರವ್ಯಂಗಳಂ ನೋಡಿ ಸಂತೋಷಚಿತ್ತನಾದ ಭಗವಂತನು ಬ್ರಾಹ್ಮಣನ ಪೂಜಿಸುತಿರ್ದನು —

ತ್ರಿಪದಿ —

ದೂರಮಾರ್ಗಶ್ರಮದ ಭಾರದಿ
ಧೂಳಿಧೂಸರ ಪದವ ಕನಕದ
ಚಾರು ಹರಿವಾಣದೊಳಗಿಟ್ಟನು ಸಾರಸಾಕ್ಷ ೧

ತರುಣಿ ಹೇಮದ ಕಲಶ ಜಲವನು
ಧಾರೆಯೆರೆಯಲು ಎರಡು ಹಸ್ತದಿ
ಚರಣಯುಗಳವ ತೊಳೆದ ಗಂಗಾಜನಕನಾಗ ೨

ತೊಳೆದ ಪಾದೋದಕವ ತನ್ನಯ
ಹೊಳೆವ ಕೋಟೀರವನು ತೊಲಗಿಸಿ
ಜಲಜನಾಭನು ಶಿರದೊಳಾಂತನು ಸಂಭ್ರಮದೊಳು ೩

ಕೊಟ್ಟನುಳಿದಿಹ ಶುದ್ಧ ಜಲವನು
ಕೋಮಲಾಂಗಿಯರಿಗೆ ರಮಾಧಿಪ
ನಿಟ್ಟ ಗಂಧಾಕ್ಷತೆಯಲರ್ಚಿಸಿ ನಿಜವಿಭವದಿ ೪

ಪರಮ ಪುರುಷನು ಭಕ್ತವತ್ಸಲ
ಬ್ರಾಹ್ಮಣನ ಪದಗಳನು ಪೂಜಿಸಿ
ಹರುಷದಿಂದಾಚರಿಸುತಿರ್ದನು ನಿರುಪಮಾತ್ಮ ೫

ಝಂಪೆ:—

ಕೃಶವಾದ ದೇಹದಲಿ ಹಸಿದು ಮಾರ್ಗಶ್ರಮದಿ
ಬಸಿವ ಬೆವರಿನ ಜಲಾಯಸವು ಪರಿವಂತೆ ೧

ಪೀತಾಂಬರದ ಸೆರಗ ಬೀಸಿಯಂಗವನೊರೆಸಿ
ಪ್ರೀತಿಯಿಂದಲಿ ಗಂಧ ಕಸ್ತೂರಿ ಪೂಸಿ ೨

ಸ್ವರ್ಣಾಂಬರೋತ್ತರೀಯವ ನುಡಿಸಿ ಪೊದಿಸಿಯಾ
ಜೀರ್ಣವಸ್ತ್ರೋತ್ತರೀಯವನು ತೆಗೆಸಿ ೩

ಕರ್ಣಕುಂಡಲ ಹಾರ ಕಟಿ ಸೂತ್ರ ಕೇಯೂರ
ಸ್ವರ್ಣ ಯಜ್ಞೋಪವೀತವನು ತೊಡಿಸಿ ೪

ಸರ್ವೋಪಚಾರ ಪೂಜಾವಿಧಾನಗಳಿಂದ
ಉರ್ವೀಸುರೋತ್ತಮನ ಉಪಚಾರಗೈದ ೫

ವಚನ:—

ಈ ಪ್ರಕಾರದಿಂದ ಷೋಡಶೋಪಚಾರಂಗಳಿಂದ ಪೂಜೆಯಂ ಮಾಡಿ ರುಕ್ಮಿಣೀ ಸತ್ಯಭಾಮಾದಿ ಕಾಂತಾರತ್ನಂಗಳ ಕರ ಕಂಕಣ ಝಣಝಣತ್ಕಾರ ಯುಕ್ತಂಗಳಿಂದ ಛತ್ರ ಚಾಮರ ವ್ಯಜನಾದಿ ಊಳಿಗವಂ ಮಾಡೆ ನಿರೂಪಿಸಿ ಭಕ್ತವತ್ಸಲನಾದ ಶ್ರೀಕೃಷ್ಣನು ಕುಚೇಲನು ಕುಳಿತಿರುವ ಸಿಂಹಾ

ಸನದಲರ್ಧಾಸನದಿ ಕುಳಿತು ಮಿತ್ರಭಾವದಿಂದ ಆತನ ತೊಡೆಯು ತನ್ನ ತೊಡೆಯು ಮೇಲಿರಿಸಿ ಆತನ ಕರವಂ ಪಿಡಿದು ಏನೆನ್ನುತಿರ್ದನು —

ರಾಗ ಮಾರವಿ ಅಟತಾಳ

ಕ್ಷೇಮವೇನಯ್ಯ ಸುಧಾಮ ಭವ್ಯ
ಭೂಮಿ ಸುರೋತ್ತಮ ಸದ್ಗುಣಧಾಮ ಪ

ಬಹಳ ದಿವಸವಾಯ್ತು ನೋಡಿ ನಿನ್ನ
ಸಹವಾಸವಾಗಿ ನಾವಿಬ್ಬರು ಕೂಡಿ
ಸಹಭವರಂತೆಡೆಯಾಡಿ ಗುರು
ಗೃಹದೊಳಗಲ್ಲಿ ವಿದ್ಯಾಭ್ಯಾಸಮಾಡಿ ೧

ಬಲು ಬ್ರಹ್ಮಚರ್ಯಾಶ್ರಮದಲಿ ಗುರು
ಕುಲ ವಾಸವಾದಮೇಲೆನ್ನ ನೀನಗಲಿ
ಸೆಲೆ ನಿನಗಾವಸ್ಥಳದಲಿ ಮಾನ
ಸಿಲುಕಿತೆ ಒಲಿದು ಗೃಹಸ್ಥಾಶ್ರಮದಲಿ ೨

ಮದುವೆ ಆಯಿತೆ ಸುಪವಿತ್ರ ನಿನ್ನ
ಸುದತಿ ಸದ್ಗುಣವಂತೆಯಹುದೆ ಸನ್ಮಿತ್ರ
ಮುದದೊಳು ನಿನಗೆ ಸುಪುತ್ರರುಂಟೆ
ಹದುಳಿಗರಹರೆ ನಿನ್ನವರು ಶುಭಗಾತ್ರ ೩

ಮುಂಜಿ ಮದುವೆ ಮಾಡಿದೆಯ ನಿನ್ನ
ರಂಜಿಪ ಸುತರಿಗೆ ಕೇಳೆನ್ನ ಪ್ರಿಯ
ಮಂಜುಳವಾಗಿರುತಿಹೆಯ ಎನ್ನೊ
ಳಂಜದೆ ಪೇಳು ಗೃಹಕೃತ್ಯದ ಬಗೆಯ ೪

ವೈರಾಗ್ಯಾದಿಗಳಿಗನುಕೂಲವಾಗಿ
ತೋರುತಲಿದೆ ನಿನ್ನ ದೇಹ ಸುಶೀಲ
ಸಾರುತ್ತಲಿದೆ ಮುಂಜಿ ಚೇಲ ಯಾಕೆ
ಬಾರದೆ ತಡೆದಿಷ್ಟು ದಿನದಿ ಕುಚೇಲ ೫

ಯಾಲಪದ —

ನಿನ್ನ ನೋಡಬೇಕೆಂತೆಂಬ ಸನ್ನುತಾಪೇಕ್ಷೆಯೋರ್ದೆ
ಧನ್ಯನಾದೆನಿಂದಿಗೆ ನಾನು ಕೇಳೈ ಕುಚೇಲ ನಿನ್ನ
ಕಂಡ ಕಾರಣದೊಳು ೧

ಎನ್ನ ಬಂಧು ಬಳಗವನ್ನು ಎನ್ನ ಪ್ರಾಣದೊಡವೆಯನ್ನು
ನನ್ನಿಯಿಂದ ಕಂಡಂತಾಯಿತು, ಕೇಳೈ ಕುಚೇಲ
ಎನ್ನ ಜನ್ಮ ಸಫಲವಾಯಿತು ೨

ಅಕ್ಕರಿಂದ ಕೇಳಿಸಗೆ ಚಿಕ್ಕತನದ ಮಿತ್ರ ನೀನು
ಮಿಕ್ಕವರು ನಿನ್ನ ಪೊನ್ನಿಗೆ, ಕೇಳೈ ಕುಚೇಲ
ತಕ್ಕವರು ನಿನ್ನ ಪ್ರೋಲ್ವನೆ ೩

ಮಿತ್ರರ ಪರಮ ಪುಣ್ಯಗಾತ್ರರ ನೋಡದವನ
ನೇತ್ರಗಳ ಯೋಗ್ಯವಲ್ಲವೆ ಪೇಳೈ ಕುಚೇಲ
ಗಾತ್ರವು ಪವಿತ್ರವಾಯಿತು ೪

ಸಾರಿ ನೀನೆನ್ನನು ನೋಡಬಾರದೆ ಇರುವುದ್ಯಾಕೆ
ಕಾರಣವ ಪೇಳು ಎನ್ನೊಳು, ನಿನ್ನಯ ಮುದ್ದು
ನಾರಿ ಪೋಗಬೇಡವೆಂದಳೆ ೫

ಝಂಪೆ —

ಯಾರನೋಡಲಿ ನಾ ವಿಚಾರಿಸುತಲಿರುತಿರುವೆ ನಿ
ನ್ನೂರ ಕಂಡರೆ ನಾನು ಬಾರದಿರುಪವನೆ ೧

ಸಾರಿ ನೀನೆನ್ನ ವಿಚಾರಿಸದೆ ಈಸುದಿನ
ದೂರವಾಗಿರ್ದುದೇ ದ್ವಾರಕಾಪುರವು ೨

ಸಾರವಿರಹಿತದ ಸಂಸಾರಿಕನಿವನೆಂದು
ಕಾರಣದಿ ಬಾರದೆ ದೂರವೆಣಿಸಿದೆಯ ೩

ಗುರುವಿಂದ ತೆರಳಿದಾನಂತರದಿ ಜರೆಯಮಗ
ನುರುಸೈನ್ಯದಟ್ಟುಳಿಗೆ ಶರಧಿ ಮನೆಯಾಯ್ತು ೪

ತರುವಾಯ ಸಂಸಾರ ಶರಧಿ ತಾ ಗುರಿಯಾದ
ಪರಿಯ ಪೇಳುವೆ ಕೇಳು ಪರಮಬಾಂಧವನೆ ೫

ವಚನ —

ಇಂತೆಂದು ಮತ್ತೂ ಏನೆನ್ನುತಿರ್ದನು.—

ತ್ರಿಪದಿ —

ಅಷ್ಟವಿಧ ಕಾರಣದಲೆನಗೀ
ಅಷ್ಟ ಮಹಿಷಿಯರುಗಳ ಪರಿಣಯ
ಎಷ್ಟು ಎಂಬೆನು ಕೇಳು ಎನ್ನಯ ಕಷ್ಟಗಳನು ೧

ಘೋರ ಮುರನರಕಾಸುರನ ಸಂ
ಹಾರಗೈಯಲು ಅಲ್ಲಿ ನಮಗ್ಗದಿ
ನಾರುಸಾವಿರ ಸತಿಯರಿರ್ದರು ಧೀರಕೇಳು ೨

ಆ ಲಲನೆಯರ ಮದುವೆಯೆನಗನು
ಕೂಲವಾಯ್ತೊಂದೊಂದು ಕಾರಣ
ಬಾಲೆಯರು ಬಯಸಿದರು ಎನ್ನನು ಶೀಲ ಕೇಳೊ ೩

ಚಿತ್ತಯಿಸು ಒಂದೊಂದು ಮಡದಿಗೆ
ಹತ್ತು ಹತ್ತಣುಗರು ಜನಿಸೆ ತಾವ್
ಮತ್ತೆ ಕೊಡುಕೊಂಬುವರು ನೆಂಟರು ವೊತ್ತವಾಯ್ತು ೪

ಒಬ್ಬ ಸತಿಯಳ ಮದುವೆಯಾದವ
ನಿಬ್ಬರಣುಗರ ಪಡೆದವನು ತ
ಬ್ಬಿಬ್ಬುಗೊಂಬನು ಎನ್ನ ಆಟವು ಹಬ್ಬವೈಸೆ ೫

ಇಷ್ಟು ಸತಿಯರಿಗಿಷ್ಟು ಪುತ್ರರಿ
ಗೆಷ್ಟು ಬಗೆಯಲಿ ಪ್ರಿಯವ ಮಾಳ್ಪೆನು
ಅಷ್ಟು ಇಷ್ಟೆಂಬುವರೆ ಎನ್ನಯದೃಷ್ಟವೈಸೆ ೬

ಶೋರುವರು ಸುದತಿಯರು ತವೊಳ್ಮೆ
ದೂರುವರು ಎನ್ನನುದಿನವು ಸಂ
ಸಾರದೊಳು ಸುಖವಿಲ್ಲ ಬರಿದೇ ಭಾರವಾಯ್ತು ೭

ಅಟತಾಳ —

ಇಂತು ಸಂಸಾರಾಂಬುನಿಧಿಯೊಳು ಭ್ರಾಂತಿಗೊಳುತ ಬಳಲುತ
ಸಂತತವು ದಿನಗಳನು ಕಳೆದೆನು ಸಖನೆ ಕೇಳು ೧
ತರುಣಿಯರ ದುಸ್ಸಂಗವೆಂಬುವ ಸೆರೆಗೆ ಸಿಲುಕಿಯನುದಿನ
ಗುರುವಿನುಪದೇಶವನು ಮರೆತೆನೊ ಪರಮಪ್ರಿಯನೆ ೨
ಧರೆಯೊಳಗೆ ಸತ್ಸಂಗದಿಂದಲಿ ದೊರಕಲರಿದೆ ಸದ್ಗತಿ
ಮರವೆಯೊಡೆದುದು ಎನಗೆ ನಿನ್ನಯ ದರುಶನದೊಳು ೩
ನಿರುಪಮನೆ ದುಸ್ಸಂಗದಿಂದಲಿ ನರಕವಹುದು ಜನರಿಗೆ
ಪರಸದಲಿ ಸತ್ಸಂಗದಿಂದಲಿ ಸ್ವರ್ಗವಹುದು ೪

ವಚನ:—

ಈ ಪ್ರಕಾರದಿಂದ ಸಂಸಾರ ಸಮುದ್ರದೋಳ್ ಸಿಲುಕಿ ಪರಗತಿಯಂ ಮರೆದಿರ್ದೆ ಇಂದು ನಿನ್ನ ಸಂದರುಶನವಾದ ಮಹಾ ಮಹಿಮೆಯಿಂದ ಪ್ರಜ್ಞಾಯುಕ್ತನಾದೆ ನಿನ್ನಯ ಸತ್ಸಂಗದಿಂದ ಎನ್ನಯ ದುರಂತವಾದ ಅಜ್ಞಾನಗಳಳಿದುವು ಅದೆಂತೆನೆ.—

ಕಂದ:—

ಎಲೆವಿಪ್ರ ಸಾಧುಸಂಗದ
ಫಲದಿಂದಲಿ ಲೇಸುಬಹುದು ಸಲೆ ಸಕ್ಕರೆಯೋಳ್
ಕಲಸನ್ನ ರುಚಿಪದಾರ್ಥವು
ಇಳೆಯೋಳ್ ಮಾಧುರ್ಯಮಾಗದಿಹುದೇ ಪೆಲ್ಲಿಲ್
ಕ್ಷಿತಿಯಲಿ ಸಾಧುಸಂಗದೋ
ಳತಿಶಯದ ಶುಭಫಲವನೀವುದದರಿಂದಲಿ ಒಂ
ದಿತಿಹಾಸಮುಂಟು ಪೇಳುವೆ
ಮತಿವಂತನೆ ಲಾಲಿಸೆನ್ನ ಮಾತ ಕುಚೇಲ

ಸತ್ಸಂಗಪರಿವರ್ಣ ದಂಡಕ

ಎಲೆ ಸಖನೆ ಕುಚೇಲ ನೀ ಲಾಲಿಸೈ ಭವ್ಯ ಸ
ತ್ಸಂಗದಿಂದಾಹ ಉತ್ಸಾಹಮಂ ಪೇಳ್ವೆನು

ಉರ್ವೀಸುರವರ್ಯೋರ್ವರ್ ಸರ್ವಾಗಮೋಕ್ತಾರ್ಥ ಸಿ
ದ್ಧಾಂತ ಸಂವೇದ್ಯಹೃದ್ಯಾ ಸದಾಚಾರ ನಿ
ಷ್ಠಂ ಗರಿಷ್ಠಂ ವರಿಷ್ಠಂ ಪರಬ್ರಹ್ಮ ಸಂವೇದ್ಯನಾ
ಚಾರ್ಯ ವರ್ಯಾತಿ ಶಿಷ್ಯರ್ಗೆ ಸದ್ವೇದ ಶಾ
ಸ್ತ್ರೇತಿಹಾಸಂಗಳಿಂ ದಿವ್ಯಪೌರಾಣ ಚೌಷಷ್ಠಿ ವಿ
ದ್ಯಾತ್ಮವಿದ್ಯಾದಿ ಬೋಧಾತ್ಮರಿಂ ಮಾಡಿರಲ್
ಓರ್ವ ಶಿಷ್ಯಾಗ್ರಗಣ್ಯಂ ಮಹಾಪುಣ್ಯ ಪುಂ
ಜಂ ವರೇಣ್ಯಂ ಸಮಸ್ತಾಗಮಾದೀ ಪ್ರಶ
ಸ್ತಾತ್ಮ ವಿದ್ಯಾಧಿಕಂ ಸಾಧು ಸಂಸರ್ಗ ಸ್ವ
ರ್ಗಾಪ ವರ್ಗಾದಿ ಕಾರ್ಯಕ್ಕೆ ಯೋಗ್ಯಂ ಗುರು
ಸ್ವಾಮಿಯಂ ಸಾರ್ದು ಸಾಷ್ಟಾಂಗ ದಂಡಪ್ರಣಾ
ಮಂಗಳಂ ಮಾಡಿ ಬದ್ಧಾಂಜಲೀ ಯುಕ್ತ ಸ
ದ್ಭಕ್ತಿಯಿಂದೆಂದ ಓ ಸ್ವಾಮಿ ನಿಮ್ಮಂಘ್ರಿ ಕಾ
ರುಣ್ಯದಿಂದಾನು ಸಂವರ್ಧ ಸಂವೇದ್ಯ ನಾ
ದೇಂ ವಿಸಂದೇಹ ನಾನಾದೆ ನಿನ್ನೊಂದು ವಿ
ಜ್ಞಾಪನಾ ದೀಕ್ಷೆಯಂ ತಾಳಿಹೇಂ ದೇವ ಏ
ನೆಂಬಿಯಾ ಬಿನ್ನಪಂ ಮಾಳ್ಪೆನೈಯ್ಯಾಮದೀ
ಯಯ್ಯದಮ್ಮಯ್ಯ ಜೀಯಾದಯಾ ಧೇಯ ನೀ
ಕೇಳು ಸತ್ಸಂಗದಿಂದಾಹ ಸತ್ಸೌಖ್ಯ ಸಂ
ದೋಹಮೇನುಂಟು ತತ್ಸಾಧು ಸಂಸರ್ಗಮಾ
ರ್ಗಂಗಳಿಂದೇನು ಲಾಭೋದಯಂ ಬಕ್ಕು ನೀ
ನಕ್ಕರಿಂದೆನ್ನ ಚಿಕ್ಕಾತ ನೀನೆಂದು ಧಿ
ಕ್ಕಾರವಂ ಮಾಡದೇ ಬೋಧಿಸೈ ಮಾರ್ಯಚಂ
ಪ್ರಾಲ ಸತ್ಪುಣ್ಯಸಾಂದ್ರಾದ್ವಿಜೇಂದ್ರಾ ಯೆನಲ್
ಚಿತ್ತದೊಳ್ ಮೆಚ್ಚಿಯಾಚಾರ್ಯನಾ ಶಿಷ್ಯನಿಂ
ಗುತ್ತರಂಗೊಟ್ಟು ಕೇಳೈ ಕುಚೇಲಾ ಸುಶೀ
ಲಾ ಸದಾ ಮುಕ್ತಿಬಾಲಾ ಮನೋ ಲೋಲನೇ ೧

ನಯವಿನಯ ಧೇಯ ನೀಕೇಳಿದೈ ಶಿಷ್ಯ ಲೋ
ಕಾಗ್ರಣೀ ಪುಣ್ಯ ಧೌರೇಯ ಸದ್ ಭಾಗಧೇ
ಯಾ ಮಹಾರಾಯ ನೀ ಮಾಡಿದೀ
ಪ್ರಶ್ನೆಗಿನ್ನುತ್ತರಂ ಪೇಳೆ ಬೊಮ್ಮಾದಿ ದೇ
ವರ್ಕಳಿಂ ವ್ಯಾಸ ವಾಲ್ಮೀಕ ಮುಖ್ಯಾದ್ಯ ಸ
ನ್ಮೌನಿ ವರ್ಗಂಗಳಿಂ ತೀರದೈ ಕೇಳು ಸ
ತ್ಸಂಗದಿಂ ಬಪ್ಪ ಸತ್ಪುಣ್ಯಮಿಂತೆಂದು ಗಣ್ಯಂಗಳಂ
ಮಾಡೆ ಶೇಷಾಹಿಯಿಂದಾಹುದೇ ಪೇಳಲಾ

ನೆಮ್ಮ ಶಕ್ತಿಪ್ರಭಾಪುಂಜನೋ ಆದಡೇ
ನಾಯ್ತು ನೀಕೇಳೆ ನಾಪೇಳದೇ ಪೋಗಲಾ
ಕ್ಷೇಪಮುಂಟೈಸೆ ಇನ್ನೊಂದು ನೀಮಾಡು ಕಂ
ಡ್ಯಾನಪೇ ಪೋಗು ಆರಣ್ಯ ಮಾರ್ಗಾಂತರ
ಪ್ರಾಂತದೋಳ್ ಗೋಮಯ ಗ್ರಾಸಮಾ
ಗಿರ್ಪ ನೀಲಾಂಗದಿಂ ಯುಗ್ಮವಾಗಿರ್ದ ಕೀ
ಟಂಗಳಂ ನಾರ್ದು ನೀಕೇಳು ಸತ್ಸಂಗ ವೃ
ತ್ತಾಂತಮಂ ಪೇಳ್ವುದೈ ಪೋಗೆನಲ್ ಶಿಷ್ಯಲೇ
ಸೆಂದು ಕಾಂತಾರಮಂ ಪೊಕ್ಕು ಕೀಟಂಗಳಂ ಕಂಡು ಕ್ರ
ಮ್ಮಾಗಮಾಗಿರ್ಪ ಜೀವಾತ್ಮರೇ ಸಾಧು ಸಂ
ಗಪ್ರಭಾವಂಗಳಿಂದಾವ ಸೌಖ್ಯಂಗಳಂ
ಟಾಹುದಾ ಚಾರು ಚಾರಿತ್ರಮಂ ಪೇಳೆನಲ್
ಕೀ[illegible] ದೇಹಮಂ ತ್ಯಾಗಮಂ ಮಾಡಿ ಪೋ
ಗ[illegible] ದ್ವಿಜಂಕಂಡು ಆಶ್ಚರ್ಯಮಂ ತಾಳಿ ತಾ
ಪ್ರೆ[illegible]ಯಾಚಾರ್ಯಗೀವಾರ್ತೆಯಂ ಸೂಚಿಸಲ್
ಕೆ[illegible] ಲೇಸಾಯ್ತು ನೀಪೋಗಿ ಈ ರಾಜಧಾ
ನಿ[illegible]ರೋಭಾಗದೋಳ್ ತೋರ್ಪ ಪದ್ಮಾಕರ
ಫ[illegible]ಲ್ಲಪತ್ಪಂಕಜಾರೋಹಮಾಘ್ರಾಣಮಂ
ವ[illegible] ಝೇಂಕಾರಮಂ ಮಾಳ್ಪ ಭೃಂಗದ್ವಯಂ

ಕೇಳಿಬಾರೆನ್ನಲಾ ವಿಪ್ರಜಾಗ್ರತ್ವದೊಳ್
ಪೊಂಗಿ ಕಾಸಾರಮಂತಾಗಿ ನೀರೇಜ ಸೌ
ರಭ್ಯ ಸಾರೇತನೋನ್ಮತ್ತ ಝೇಂಕಾರ ಮು
ಕ್ತಾಳಿ ಯುಗ್ಮಂ ಬುಧಂ ನೋಡಿ ಪೇಳ್ ಷಟ್ಪದ
ಶ್ರೇಷ್ಠರೇ ದಿವ್ಯಸತ್ಸಂಗದಿಂದೇನು ಲಾ
ಭಾಗಮು ಪ್ರಾಪ್ತಿಯೆನ್ನಲ್ ಸುಧಾಸೂಕ್ತನಾ
ದಂಗಳಂ ಕರ್ಣದೊಳ್ ಕೇಳಿಯಾದುಂಬಿಗಳ್
ಗಾತ್ರಮಂಮಾಣ್ದಡಾ ಚಿತ್ರದಿಂ ನೇತ್ರದಿಂ
ನೋಡಿ ಸಚ್ಛಾಸ್ತ್ರ ಪಾರೀಣನಾಗಿರ್ಪ ಭೂ
ದೇವನತ್ಯಂತಸಂತಾಪದಿಂ ಬಂದು ಆಚಾರ್ಯಗಾ
ಷ್ಟಂಗ ವೃತ್ತಾಂತವಂ ಬಿನ್ನಪಂಗೈಯೆ ಲೇ
ಸಾಯ್ತು ಈ ಪಟ್ಟಣಾಧೀಶನಾಗಿರ್ಪ ರಾ
ಜೇಂದ್ರ ನಾರಾಮದೊಳ್ ಭಾಸುರಾಕಾರ ದಿಂ
ದಿರ್ಪ ಮಾಕಂದವೃಕ್ಷಾಗ್ರಭಾಗಾಂತರಾ
ಸೀನವಾಗಿರ್ಪವು ದ್ವಂದ್ವಕೀರಂಗಳಂ
ಕೇಳಿಬಾರೆಂದು ಸಂತೈಸೆ ಸಂತೋಷದಿಂ
ನಂದನೋದ್ಯಾನ ದಂತಿಪ್ರ ತದ್ರಾಜನು
ದ್ಯಾನಮಂಪೊಕ್ಕು ನೋಡಲ್ ಫಲಂಗಳ್ ಸುಮಂ
ಗಳ್ ಲಸತ್ಪಲ್ಲವಂಗಳ್ ಮಹಾಪುಂಜದಿಂ
ದಿರ್ಪ ಶಾಖೋಪಶಾಖಂಗಳಿಂದೊಪ್ಪುವಾ
ತಾಳ್ದಮಾಕಂದ ಭೂಜಾತಶಾಖಾಗ್ರದೊಳ್
ತೋರ್ಪ ಮಾಧುರ್ಯಭಾಷಾ ಪ್ರವೀಣತ್ವದಿಂ
ರಾಜಿಪಾಕೀರವರ್ಯಂಗಳಂ ನೋಡಿ ಮಾ
ತಾಡಿದಂ ಮಾರನಶ್ವಂಗಳೇ ಕೇಳಿ ಸ
ತ್ಸಂಗದಿಂದೇನು ಪುಣ್ಯಂಗಳುಂಟಾಹುದಾ
ದಿವ್ಯ ವೃತ್ತಾಂತಮಂ ಸತ್ಕೃಪಾವೋದದಿಂ
ಪಾಲಿಸಲ್ ಬೇಕೆನಲ್ ಕೇಳಿ ಶೃಂಗಾರದಿಂ

ತೋರ್ಪ ಕೀರಂಗಳಾ ಕಾಯಮಂ ಮಾಯಮಂ
ಮಾಡಿಪೋಗಲ್ ಬುಧ ಸ್ತೋತ್ರ್ಯನತ್ಯಂತಚಿಂ
ತಾಭರಕ್ರಾಂತಕಾನಾಗಿ ಯಾಸದ್ಗುರು
ಸ್ವಾಮಿಯುಂ ಸಾರ್ದು ಕೀರಾಂಗಭಂಗ ಪ್ರಸಂ
ಗಂಗಳಂ ಪೇಳೆ ಕೇಳ್ದಾಧರಾನಿರ್ಜರ
ಶ್ರೇಷ್ಠನಿಂತೆಂದನೈಯಾ ಸುಧಾಮಾ ಮಹಾ
ಪುಣ್ಯಧಾಮಾ ಸದಾ ಪುಣ್ಯನಾಮಾ ೨

ಶುಭಮತಿಯುಳ್ಳ ಸಾರ್ವಭೌಮನಾರಯ್ಯ ತಿ
ಷ್ಠೋತ್ತಮಾ ಸದ್ಗುಣಸ್ತೋಮ ಈ ರಾಜ್ಯವ
ನ್ನಾಳ್ವ ರಾಜನ್ಯಮಾನ್ಯಂ ಮಹಾ ಧನ್ಯನಾ
ಗಿರ್ಪ ಭೂಪಾಲ ಲೋಕಾಗ್ರಗಣ್ಯಂ ವಯೋ
ವೃದ್ಧಧರ್ಮಾತ್ಮನಾಗಿರ್ಪ ರಾಜಂಗೆ ತ
ದ್ವಂಶ ವೃಷ್ಟ್ಯೈಕಸದ್ದೀಕ್ಷೆಯುಂ ತಾಳೆ ಸತ್
ಪುತ್ರ ಸಂತಾನರಾಗೀರ್ಪರೀಪಾಗ ಸಂ
ಜಾತರಾದರ್ಭಕಾಪುತ್ರನುಂ ಪುತ್ರಿಯುಂ
ಭಾಸುರಾಕಾರದಿಂ ರಾಜಸೌಧಾಗ್ರದೋಳ್
ಸೂತಿಕಾಗಾರದೋಳ್ ಮಂಗಳಾಂಗಂಗಳಿಂ
ದಿರ್ಪ ಆ ಬಾಲರಂ ಕೇಳಿದರ್ಪೇಳುವ

ಪುಣ್ಯಮುಳ್ಳಂಥ ಸತ್ಸಾಧುಸಂಸರ್ಗದಿಂ
ಬಪ್ಪಲಾಭಂಗಳಂ ಪಾಪಭಂಗಂಗಳಂ
ಸತ್ಯಮಾವಾಕ್ಯ ನೀಕೇಳಿಬಾ ಪೋಗೆನಲ್
ವಂದನಂಗೈದು ಸಾನಂದದಿಂದಾದ್ವಿಜಂ
ಬಂದು ರಾಜಾಲಯಂ ಪೊಕ್ಕಡಾಭೂವರಂ
ಅರ್ಘ್ಯಪಾದ್ಯಾಚಮಾನಂಗಳಿಂಸಾನುರಾ
ಗಂಗಳಿಂಸಾದರಾಲೋಕನಂಗೈದು ಸಿಂ
ಹ ಸನಾಸೀನನಂಮಾಡಿ ವೇದೋಕ್ತಪಾ

ಶ್ರೀವರ್ಣಜೋಪ್ಪಂದವಂ ತಾಳ್ದು ಸಂತೋಷದಿಂ
ದೆಂದನೆನ್ನೈ ಬುಧಸ್ವಾಮಿ ನೀ ಬಂದಕಾ
ರ್ಯಂಗಳಂ ಪೇಳಲಾವಮ್ಮಾಡುವೆಂ ಮೂರ್ಧ್ನದೊಳ್
ತಾಳ್ದು ಯೆಂದಾಮಹೀಪಾಲನಾಡಲ್ ದ್ವಿಜ
ಶ್ರೇಷ್ಠನಿಂತೆಂದನೈ ರಾಜಮಾರ್ತಾಂಡ ಓ
ರಾಜಕಂಠೀರವಾ ನಿನ್ನ ಸತ್ಪುತ್ರರಂ
ಕಂಡು ಮಾತಾಡಿಪೋಗಲ್ ಮಹಾಪೇಕ್ಷೆಯಿಂ
ಬಂದೆನೈ ರಾಜವರ್ಯಾಯೆನಲ್ ನಕ್ಕು ರಾ
ಜಾನ್ವನಿಂತೆಂದ ಬಾಲೇಂದುವಿಂದಂಧಕಾ
ರಂಗಳುಂ ಪೋಪುದೇ ಈಗ ಜನ್ಮಂಗಳಂ
ತಾಳ್ದ ಬಾಲರ್ಕಳೆಂತೈಯ ಭಾಷಾವಿಶೇ
ಷೋಜ್ವಲ ಸ್ಫೂರ್ತಿಯುಂಟೇ ಮಹಾ
ದೇವಯೆನ್ನಲ್ ದ್ವಿಜೋತ್ತಂಸ ನಿಂ
ತೆಂದ ರಾಜಾಧಿರಾಜಾ ರಮಾಧೀಶನಾ
ಗಿರ್ಪ ನಾರಾಯಣಾನಂತ ಕಾರುಣ್ಯದಿಂ
ಬಾಲರಂನೋಡಿ ಮಾತಾಡುವೆಂ ತೋರು ಸಂ
ದೇಹಮೇನೆಂದು ಸಂವಾದಿಸಲ್ ಭೂಪತಾ
ಕೇಳಿ ಈ ವಿಪ್ರನೋಳ್ ತರ್ಕಿಸಲ್ ಸಲ್ಲದೆಂ
ದಾತನಂಗೊಂಡು ಆ ಸೂತಿಕಾಮಂದಿರ
ದ್ವಾರದೋಳ್ ನಿಂದು ದಾಸೀಕದಂಬಂಗಳಂ
ಬಾಲರಂ ಕೊಂಡುಬಾರೆನ್ನಲಾವಾಗ ಪೂ
ರ್ವದ್ವಯಾಸೀನರಾಗಿರ್ಪ ಆ ಯುಗ್ಮಸಂ
ತಾನಮುಂ ತಂದಿಡಲ್ ನೋಡಿ ಭದೇವೇಪ್ಸಿಂ
ತೆಂದನಾ ಪೌರುಷಾಕಾರರಾಗಿರ್ದ ಬಾ
ಲರ್ಕಳಂ ಕಂಡು ಓ ರಾಜವಂಶಾಗ್ರಣೀ
ಬಾಲಚೂಡಾಮಣೀ ಪೇಳು ಸತ್ಸಂಗದಿಂ
ದೇನು ಸತ್ಪುಣ್ಯಸುಖಾತ್ಮಯುಂಟಾಪುದೈ

ಲೋಕದೊಳ್ ಸಾಧುಸಂಸರ್ಗಮೇ ಮುಖ್ಯಮೆಂ
ದೆಂದು ಪೌರಾಣಶಾಸ್ತ್ರಾಗಮಾಚಾರ್ಯರಿಂ
ಪ್ರೋಕ್ತಮಾಗಿರ್ಪುದೈಯರ್ಥಕಾನಿರ್ಧಯಂ
ತಾಳಿ ಈ ಪ್ರಶ್ನೆಗಿನ್ನುತ್ತರಂ ಗೊಟ್ಟುಸಂ
ತೋಷದಿಂ ಮೌನವಂತಾಳೆನಲ್ ಆ ದ್ವಿಜ
ಸ್ವಾಮಿವಾಕ್ಯಾಮೃತಂಗಳ್ ಪರಶ್ರೋತ್ರದೊಳ್
ಪೊಂಗಲಾಬಾಲಕಂ ದಿವ್ಯ ಸುಜ್ಞಾನ ಸಂ
ಪನ್ನದೀಕ್ಷಾಧುರಂಧರ್ಯ ತಾನಾಗಿ ಇಂ
ತೆಂದನೈ ಭೂಸುರೇಂದ್ರಾ ಮಹಾಪುಣ್ಯಸಾಂದ್ರಾ ೨೬

ನಿರುಪಮಗುಣಪೂರ್ಣನೀಂ ಪ್ರಶ್ನೆಯಂ ಮಾಡಿ ಆ
ಚಾರ್ಯರಂ ಜೇಡಿ ಪ್ರತ್ಯುತ್ತರಪ್ರೌಢಿಯಂ
ನೋಡನೀಂ ಬಂದೆಯೋ ಮುಕ್ತಿಕಾಂತಾ ಮನಃ
ಕಾಂತ ಸುಜ್ಞಾನವಂತಾ ಮಹಾಶಾಂತ ಈ
ಪ್ರಶ್ನೆಗಿನ್ನುತ್ತರಂ ಪೇಳಲೀರೇಳು ಲೋ
ಕಂಗಳಂ ಪೊಕ್ಕು ಕೇಳಲ್ ಮನೋಭೀಷ್ಟಪೂ
ರ್ತೈಸದೈ ಇನ್ನುಪೇಳಲ್ಕೆ ಯೋಗ್ಯಂಗನೇ
ಸಾಧುಧೌರೇಯ ನಾವೀರ್ವರಾರೆಂದು ನೀ
ಕೇಳಬಂದೈಬುಧ ಸ್ತೋತ್ರಪಾತ್ರಾಸದಾ
ಸತ್ಪವಿತ್ರಾ ಮಮಸ್ವಾಮಿ ನೀಕೇಳು ನಾ
ಪೇಳುವೆಂ ದಿವ್ಯಸತ್ಸಂಗಭಾಗ್ಯಂಗಳಂ
ಯೆಂತೆನಲ್ ನಾವು ಪೂರ್ವಾರ್ಜಿತಾಘೌಘದಿಂ
ಘೋರಕಾಂತಾರದೊಳ್ ನೀಚಮಾಗಿರ್ಪ ಕೀ
ಟಂಗಳೊಳ್ ಪುಟ್ಟಿ ಸುಜ್ಞಾನಶೂನ್ಯಂಗಳಾ
ಗಿರ್ದೆವೈ ನೀನು ಮತ್ಪ್ರಾಂತ್ಯಮಂಸಾರ್ದು ಒಂ
ದೀಕ್ಷಣಂನಿಂದು ಮಾತಾಡಿಸಲ್ ನಿನ್ನ ಸ
ತ್ಸಂಗದಿಂ ನಾವು ಕ್ರಿಮ್ಯಾಗಮಂಬಿಟ್ಟೆಲೇ

ನಾದಕಾಸಾರದೊಳ್ ಭೃಂಗಮಾಗಿರ್ದ್ದೆವೈ
ಸರ್ವಸತ್ಪುಷ್ಪ ಸೌರಭ್ಯಸಂಪನ್ನರಾ
ಗಿರ್ದ್ದೆವೈ ಯಲ್ಲಿಗೈತಂದೆಯೋ ತಂದೆನೀ
ಬಂದು ಕಾರುಣ್ಯದಿಂ ನಿನ್ನ ಶ್ರೀಮೂರ್ತಿಯಂ
ತೋರಿ ಒಂದುಕ್ತಿಯನ್ನಾಡಲಾ ಪುಣ್ಯದಿಂ
ನಾವು ಷಟ್ಪಾದದೇಹಂಗಳಂ ಮಾಣ್ದುಮೇ
ಲಾದ ಈ ರಾಜನಾರಾಮದೊಳ್ ಕೀರಮಾ
ಗಿರ್ದ್ದೆವೈಯಲ್ಲಿ ನೀಬಂದು ಸಂಭಾಷಣಂಗೈದು ಸಿ
ನ್ನಂಘ್ರಿ ಸಂದರ್ಶನಾರೂಢರಂ ಮಾಡಲಾ
ಕೀರಗಾತ್ರಂಗಳಂ ಪೋಗಿ ಈ ಜನ್ಮದೊಳ್
ಮಾನುಷಾಕಾರಮಂ ತಾಳಿರಾಚಾನ್ವಯಾ
ಧೀಶರಾವಾದೆವೈ ಈಗನೀಬಂದು ಸ
ನ್ಮೂರ್ತಿ ಸಂದರ್ಶನಾಲಾಭವನ್ನಿತ್ತೆ ಈ
ದೇಹದೊಳ್ ನಾವು ಪ್ರಾರಬ್ಧ ಮುಂತಾದ ಪಾ
ಪಂಗಳಂಪೋಗಿ ಅಜ್ಞಾನಮಂನೀಗಿ ಸು
ಜ್ಞಾನಮಂತಾಳ್ದು ಸಂಸಾರವಾರಾಶಿಯಂ
ಗೆಲ್ದು ಆಯಾಸಮಾಗಿರ್ಪ ಆ ರಾಟವಾ
ಳಂಗಳಾಗಿರ್ಪ ಇಂಥಾ ಪುನರ್ಜನ್ಮಜ
ನ್ಮಂಗಳಂ ಬಿಟ್ಟು ಲಿಂಗಾಂಗಭಂಗತ್ವದಿಂ
ನಾವು ವೈಕುಂಠದೊಳ್ ನಿಂದು ಮೋಕ್ಷ ಪ್ರಭಾ
ಪುಂಜ ಸಂದೋಹದಿಂ ಪುಣ್ಯಮಾನಂದದಿಂ
ದಿವ್ಯ ಸಾರೂಪ್ಯಮಂ ತಾಳ್ದು ಸಂತೋಷದಿಂ
ದಿರ್ಪೆವೈ ನಿನ್ನ ಪಾದಾರವಿಂದ ಪ್ರಸ
ನ್ನತ್ವದಿಂದೆಮ್ಮ ಕರ್ಮಂಗಳಂ ಪೋಗಿ ನೈ
ರ್ಮಲ್ಯಮಾಗಿರ್ಪ ಸಮ್ಮುಕ್ತಿಯೋಗ್ಯಂಗರಾ
ಗಿರ್ಪೆವೈ ಬ್ರಾಹ್ಮಣಾಗ್ರಣ್ಯನೇ ನಿನ್ನ ಸ
ತ್ಸಂಗದಿಂದಿಂತು ಸುಜ್ಞಾನಮಂ ತಾಳ್ದೆವೈ

ಎಮ್ಮನುಂ ಪೋಲ್ವರಾರುಂಟು ಯೆಂತೆಂದು ಆ
ಯರ್ಭಕಂವಮೌನವಂ ತಾಳಲಾವಾಗ ಧಾ
ತ್ರೀ ಸುರೇಂದ್ರಾಂಘ್ರಿ ಪದ್ಮಂಗಳಂ ಪೂಜೆಯಂ
ಮಾಡಿಯಾರಾಯನಾಶ್ಚರ್ಯಮಂ ತಾಳಿ ಬೀ
ಳ್ಕೊಟ್ಟಡಾ ಶಿಷ್ಯತಾ ಬಂದು ಆಚಾರ್ಯಗೀ
ವಾರ್ತೆಯಂ ಪೇಳಿ ಸತ್ಸಂಗಸೌಖ್ಯ ಪ್ರಭಾ
ವಂಗಳಂ ಚಿತ್ತದೋಳ್ ತಾಳ್ದು ತಾ ಸದ್ಗುರು
ಸ್ವಾಮಿ ಸೇವಾಧುರೀಣಾತ್ಮನಾಗಿರ್ದನೈ
ಯಾ ಕುಚೇಲಾ ಸುಶೀಲಾ ಮನೋಲೋಲ ನೀ
ನಿಂತು ಸತ್ಪುಣ್ಯಮುಂಟಾದ ಸದ್ಬ್ರಾಹ್ಮಣ
ಶ್ರೇಷ್ಠ ನಿನ್ನಂಘ್ರಿಸಂದರ್ಶನಾಪೇಕ್ಷೆಯಂ
ಮಾಡಿ ಸತ್ಸಂಗಮಂ ನಾನು ಸಂಪಾದನಂ
ಗೈದೆ ಸಾಂದೀಪರಂ ಕಂಡ ಸಂತೋಷಮಂ
ತಾಳ್ದೆನೈಯಾ ಕುಚೇಲಾ ಸದಾಭವ್ಯ ಸ
ತ್ಸಂಗದಿಂದಾಹ ಸತ್ಪುಣ್ಯವನ್ನೀವ ಈ
ದಂಡಕಂ ಭಕ್ತಿಯುಂಟಾಗಿ ತಾ ಪೇಳ್ವರಂ
ಕೇಳ್ವರಂ ಲೇಖನಂಗೈವರಂ ವಾಚಿಸಲ್
ಬಲ್ಲರಂ ಪಾಠಮಂ ಮಾಳ್ಪರಂ ಜ್ಞಾನ ಸ
ದ್ಭಕ್ತಿ ವೈರಾಗ್ಯ ಸದ್ಭಾಗ್ಯ ಸಂಯುಕ್ತರಂ
ಮಾಳ್ಪ ಶ್ರೀ ಮನ್ನೃಸಿಂಹನ್ನಮಸ್ತೇ ನಮಸ್ತೇನಮಃ ೧

ವಚನ —

ಇಂತೆಂದು ಶ್ರೀಕೃಷ್ಣನು ಕುಚೇಲನೊಡನೆ ಮತ್ತೇನೆನ್ನುತಿರ್ದನು.-

ಪದ --

ಕೇಳು ಭೂಸುರವರನೆ ಕೇಳೆನ್ನ ಸಖನೆ
ಕೇಳೆನ್ನ ಬಾಂಧವನೆ ಕೇಳೆನ್ನ ಪ್ರಿಯನೆ ೧

ತ್ರಿವಿಧಜೀವರಪರಿಯ ತಿಳಿವಂತೆ ನಿನಗೆ
ವಿವರಿಸಿ ನಾ ಪೇಳ್ವೆ ವಿಶ್ರುತಮಾಗಿ ೨

ಮುಕ್ತಿಯೋಗ್ಯರುಗಳು ನಿತ್ಯ ಸಂಸಾರ
ಯುಕ್ತರು ತಮೋಯೋಗ್ಯರುಗಳು ೩

ಸಾತ್ವಿಕಗುಣಗಳು ಮುಕ್ತಿಯೋಗ್ಯರಿಗೆ
ನಿತ್ಯ ಸಂಸಾರರಿಗೆ ನಿಜರಾಜಸಗುಣ ೪

ತಾಮಸಗುಣಗಳು ತಮೋಯೋಗ್ಯರಿಗೆ
ಈ ಮೂರು ಗುಣಗಳಾಗಿರುವಭಾಜನರು ೫

ಸುಕರಮಾಗಿರುತಿರ್ಪ ಸುಜ್ಞಾನಯೋಗ
ಮುಕುತಿಯೋಗ್ಯರಿಗೆ ಕಾಮ್ಯಕಯೋಗ ೬

ನಿತ್ಯಸಂಸಾರರಿಗೆ ನಿಜವಿಪಜ್ಞಾನ
ಅತ್ಯಂತಸಾಧನವು ತಾಮಸಜನಕೆ ೭

ಅಹಿವಿಭೂಷಣ ಶ್ರೀ ಮಹಾದೇವನಿಂದ
ಮಹಿತಾರ್ಥತಾರಕ ಮಂತ್ರೋಪದೇಶ ೮

ವಿರಜಾನದೀಸ್ನಾನ ವರಜಗತ್ಪ್ರಾಣ
ಕರಗದಾಘಾತದಿಂ ಘನಲಿಂಗದೇಹ ೯

ಭಂಗವಾಗಿಯು ಬಳಿಕ ಬ್ರಹ್ಮನಿಂಗೂಡಿ
ಶೃಂಗಾರದಿಂ ಪುನರ್ಜನ್ಮಗಳ ತೊರೆದು ೧೦

ವೈಕುಂಠದೋಳ್ನಿಂದು ವರಚತುರ್ಭುಜದಿ
ಸಾಕಾರವಾಗಿರ್ಪ ಸಾರೂಪ್ಯ ಮುಖ್ಯ ೧೧

ಮುಕ್ತಿಯನ್ನೈದುವರು ಮುದದಿಂದಲವರು
ಮುಕ್ತಿಯೋಗ್ಯರು ಕಣಾ ಮುದದೊಳವಧರಿಸು ೧೨

ಘನತರಮಾಗಿರ್ದ ಕಾಮ್ಯಕರ್ಮಗಳ
ನನುದಿನಂಗಳು ಮಾಡಿ ಆದರ ತರುವಾಯು ೧೩

ತತ್ಪುಣ್ಯಫಲದಿಂದ ಸ್ವರ್ಗಾನುಭವರಾಗಿ
ತತ್ಪುಣ್ಯಫಲತೀರೆ ಭೂಭಾಗದೋಳ್ ಜನಿಸಿ ೧೪

ಸುಕೃತದುಷ್ಕೃತವನು ಸುಲಭದಿಂ ಮಾಡಿ
ಪ್ರಕಟ ಸ್ವಲೋಕನರಕವನುಭವಿಸಿ ೧೫

ಪಾವನರಹಿತರೆಂಭತ್ನಾಲ್ಕುಲಕ್ಷ
ಜೀವರಾಶಿಗಳಲ್ಲಿ ಜನನಮರಣಗಳ ೧೬

ತೊಳಲಿಬಳಲುತಲಿ ಸುಖದುಃಖಾನುಭವವ
ಸಲಿಸುತಿಪ್ಪರು ನಿತ್ಯಸಂಸಾರರಿವರು ೧೭

ಅಖಿಲಜನ್ಮಂಗಳಲಿ ಅಜ್ಞಾನಗಳನು
ಸುಖವೆನ್ನುತಲಿಮಾಡಿ ಶುದ್ಧತಾಮಸರು ೧೮

ಪರಯಮಾಲಯದಲ್ಲಿ ಪರಿಪರಿಯಾದ
ನರಕಯಾತನೆಗಳನುಭವಿಸಿ ಬಳಿಕ ೧೯

ಕಲಿಯಿಂದ ಉಪದೇಶ ಕಲಿಗದಾ ಪ್ರಹರ
ದಲಿ ಲಿಂಗದೇಹಮಂಕಳೆದು ಬೇಗದಲಿ ೨೦

ನಚಪುನರಾವರ್ತಿಯಚಲವಾಗಿರ್ದ
ಸಚರಿತಪೂರ ನಿಸ್ಸಾರ ದುಷ್ಪೂರ ೨೧

ಪಂಥಂತಮೋಪ್ರಾಪ್ತಿಯಾಗಿ ಸಂತತವು
ಬಂಧುರಶೋಕದೋಳ್ ಬಳಲುವರವರು ೨೨

ಘನತಮೋಯೋಗ್ಯರುಗಳು ಕೇಳು ಕುಚೇಲ
ಇನಿತು ತ್ರೈವಿಧಜೀವರನುಭವ ವಿನಿತು ೨೩

ಇದುಕೇಳನಾದಿಯಿಂದುದಿತವಾಗಿಹುದು
ಸದಮಲಸುಜ್ಞಾನ ಸಾತ್ವೀಕವೃತ್ತಿ ೨೪

ಯುಳ್ಳವರು ಮುಕ್ತಿಯೋಗ್ಯರೀ ಜಗದಿ
ಬಲ್ಲಿದವರುಗಳು ಪರಮಪಾವನರು ೨೫

ಅಮಿತದುಸ್ತರವಾದ ಎನ್ನ ಮಾಯವನು
ಕ್ರಮದಿಂದಗೆಲಿದು ಅಜ್ಞಾನಮಂ ತೊರೆದು ೨೬

ತಾರತಮ್ಯವತಿಳಿದು ತತ್ವಜ್ಞರಾಗಿ
ಸಾರವಿರಹಿತದ ಸಂಸಾರದೊಳ್ ಸಿಲುಕಿ ೨೭

ಸಿಲುಕದಂದದಿ ಪದ್ಮದೆಲೆಯು ಜಲಸ್ಪರುಶ
ದಲಿ ಇಲ್ಲದಂತೆ ನಿತ್ಯಾನಂದರಾಗಿ ೨೮

ಭಕ್ತಿಯಿಂದೆನ್ನ ಸರ್ವೋತ್ತಮನೆಂಬ
ಯುಕ್ತಿಯನ್ನರಿದು ಸನ್ಮುಕ್ತಿಮಾರ್ಗವನು ೨೯

ಅರಿತುನಿಷ್ಕಾಮದಿಂದರ್ಚಿಸಿ ಎನ್ನ
ಶರಣೆಂಬುವರ ನಾನು ಪರಿಪಾಲಿಸುವೆನು ೩೦

ಅವರೆನ್ನಬಾಂಧವರವರೆನ್ನ ಮಿತ್ರ
ರವರೆನ್ನ ಪ್ರಾಣಗಳವರೆನ್ನ ಸಖರು ೩೧

ಅವರೆನ್ನ ಭಕ್ತರುಗಳವರೆನ್ನ ಸಖ್ಯ
ರವರಿಗಿಂದಧಿಕವಿಲ್ಲವು ಜಗತ್ರಯದಿ ೩೨

ಇಂತಪ್ಪ ಸುಜ್ಞಾನವಿಧದ ಮಾರ್ಗವನು
ಸಂತರಾಗಿರುತಿರ್ಪ ಸದ್ಗುರುಗಳಿಂದ ೩೩

ತಿಳಿಯಬೇಕಲ್ಲದೆ ತಿಳಿವುದೇ ಬರಿದೆ
ಹಲವು ಯೋಚನೆಗಳಿಂದಾಗದೀಯೋಗ ೩೪

ಆದರಿಂದ ಗುರುಕುಲವಾಸವಂಮಾಳ್ಪ
ದದುಯುಕ್ತವೆನಿಸುವುದು ಮುಕ್ತಿಕಾರಣವು ೩೫

ಕೇಳು ನಾವೀರ್ವರು ಬಾಲರಾಗಿರ್ದ
ಕಾಲದಿಂ ಸಾಂದೀಪರಾಲಯದಲ್ಲಿ ೩೬

ಸಕಲವಿದ್ಯಾಭ್ಯಾಸ ಸಕಲಶುಶ್ರೂಷೆ
ಅಕಳಂಕದಿಂಗೈದು ಅನುಗಾಲವಿರ್ದ ೩೭

ಸಮಯದೊಳಗೊಂದುದಿನ ನಮಗಾದಪರಿಯ
ವಿಮಲಾತ್ಮ ಮರೆತೆಯೋ ವಿಜ್ಞಾನಮುಂಟೊ ೩೮

ಎಂದು ಶ್ರೀ ಕೃಷ್ಣನು ಮುಂದು ಗುರುವುಗಳ
ಮಂದಿರದೊಳಗೆ ಸಾನಂದದಿಂ ಸೇವೆ ೩೯
ಮಾಡಿದ ಪರಿಗಳಂ ಮನುಜನಂದದಲಿ
ಆಡುತಲಿರ್ದ ಸುಧಾಮಾಖ್ಯನೊಡನೆ ೪೦

ವಚನ:—

ಈ ಪ್ರಕಾರದಿಂದ ಶ್ರೀ ಕೃಷ್ಣನು ನಿರೂಪಿಸಿ ಪೂರ್ವಪ್ರಸಂಗವಂ ಕುಚೇಲನೊಡನೇನೆಂದು ಬಣ್ಣಿಸುತಿರ್ದನು.—

ಕೇಶಾರಗೌಳ ಝಾಪುತಾಳ

ಮರೆದೆಯೇನೈಸಖನೆ—ಕುಚೇಲನೆ
ಮರೆದೆಯೇ ನೈಸಖನೆ ಪ.

ಮರೆದೆಯೇನೈಯ ಸದ್ಗುರುಗಳ ಬಳಿಯಸಾ
ವಿರುವಕಾಲದಿಗ್ಹೈದ ಪರಿಪರಿ
ಚರಿಯ ಭಯಭರಿತಾನುಭವವ ಅ.

ಅನಘ ನೀಕೇಳೊಂದು ದಿನವೆಮ್ಮ ಗುರುಪತ್ನಿ
ವನಕೆಪೋಗಿ ಇಂಧನವನ್ನು ತರಹೇಳಿ
ಕನಲಿ ಕೋಪವಮಾಡಲು—ನಾವೀರ್ವರು
ವಿನಯದಿಂ ಪೊರಮೊಡಲು—ಆ ಘೋರಕಾ
ನನವನ್ನು ಪೊಗುತಿರಲು—ಆ ಸಮಯದೊಳ್
ಅನುಪಮ ಪ್ರಳಯಾನಿಲಾಗಮ
ಘನಘನಸ್ವನ ಚಪಲಮಯ ಸಂ
ಜನಿತ ಪವಿಪತನಾಗಿಯದ್ಭುತ
ವೆನಿಪ ಮಳೆ ಭಯಪಡಿಸಿದುದನೀ ೧

ತರಣಿಮಂಡಲವಸ್ತಗಿರಿಯ ಸಾರಲು ಶಂಕೆ
ತೋರದು ಕಾಳ್ಗತ್ತಲೆ ಪರಿದುವೇದ್ಯೆಸೆ ದು

ಸ್ತ್ರರವಾಗಿ ನಾವೀರ್ವರು— ಮಾರ್ಗವಕಾಣ
ಲರಿಯದೆ ಕಡುಬೆದರು—ಗೊಳ್ಳುತ ಮಿಂಚು
ಬರಲು ಬೆಳಕಿನವರು—ನಾವಾಗುತ
ಕರಗಳನುವಿಡಿದುರುತರದ ಕರಿ
ಕರದ ಪೋಲ್ಮಳೆಗರೆಯೆ ನೆನೆದಂ
ಬರವು ನಡುಗುತ ನಾವು ರಾತ್ರಿಯೊಂ
ಳಿರುವುದಕೆನೆಲೆಯರಸುತಿರ್ದುದ ೨

ಕರಿ ಸಿಂಹ ಶಾರ್ದೂಲ ಕರಡಿ ಕಾಡೆಮ್ಮೆ ಸೂ
ಕರ ಘೂಕ ಕಾಕ ಸಂಚರಮಾದವಿಪಿನದೋಳ್
ಚರಿಸುತ್ತಲಿರಲಿಲ್ಲವೆ-ಒಂದಾಲದ
ಮರನ ಸಾರಿದೆವಲ್ಲವೆ—ಆ ಯಿರುಳುಜಾ
ಗರವ ಮಾಡಿದುದಿಲ್ಲವೆ---ನಿದ್ರೆಯು ಪರಿ
ಹರಿದು ಸದ್ಗುರು ಚರಣಕಮಲ
ಸ್ಮರಣೆಯನು ಹೃತ್ಸರಸಿರುಹದೊಳು
ಧರಿಸಿ ಧೈರ್ಯದೊಳಿರಲು ಬಾದಿರಿ
ಪುರಿ ನೃಸಿಂಹನ ಕರುಣವಾದುದ ೩

ವಚನ:—

ಈ ಪ್ರಕಾರದಿಂದ ನಾವೀರ್ವರೂ ಅರಣ್ಯವಾಸಿಗಳಾಗಿ ಹಸಿವು ತೃಷೆಗಳಿಂದ ಬಸವಳಿದಿರುತ್ತಿರಲು ಸೂರ್ಯೋದಯಾನಂತರದಲ್ಲಾದ ಪರಿಯಂ ಪೇಳುವೆ ಕೇಳೆಂದು ಶ್ರೀ ಕೃಷ್ಣನು ಕುಚೇಲನೊಡನೆ ಏನೆಸ್ಕುತ್ತಿರ್ದನು.—

ಝಂಪೆ:—

ಅಂದಿನಿರುಳಲಿ ನಾವು ಮಂದಿರವ ಪುಗದಿರಲು
ಸಾಂದೀಪರಾದ ಗುರುವಂದು ನಿಜಮನದಿ ೧
ಮಾರರನು ಪೋಲ್ವ ಸುಕುಮಾರರನು ಇಂಧನಕೆ
ತಾರೆಂದು ಕಳುಹುವರೆ ಘೋರಕಾನನಕೆ ೨

ನಾರಿನೀನಲ್ಲ ಹೆಮ್ಮಾರಿ ಘೋರಾಕಾರಿ
ವೈರಿಯಪಕೀರ್ತಿ ಸ್ವಾಕಾರಿ ವೈಯಾರಿ ೩
ಇಂತು ಸತಿಯಳ ಬೈದು ಚಿಂತಿಸುತಲಂದಿರುಳು
ಅಂತವಿಲ್ಲದೆ ಯುಗಗಳಂತೆ ತಾ ಕಳೆದು ೪
ಅರುಣೋದಯದೊಳೆದ್ದು ಗುರುವರನು ನಮ್ರವನು
ಅರಸುತಲಿ ಕಾನನಕೆ ಬರನೆ ಬಾಯ್ಬಿಡುತ ೫

ಸಸಪ —

ವನದೇವಿ ಕಾಣೆಯಾ ವನಜಾಯತಾಕ್ಷನಾ
ಭೂದೇವಿ ಕಾಣೆಯಾ ಭೂಧವನ್ನ
ತರುಗಳೇ ಕಾಣಿರೇ ತರುಶಾಪವಿದಳನ್ನ
ಖಗರಾಜ ಕಾಣೆಯಾ ಖಗವಹನ್ನ
ಮೃಗಗಳೇ ಕಾಣಿರೇ ಮೃಗರಾಜವರದನ್ನ
ಗಿರಿಗಳೇ ಕಾಣಿರೇ ಗಿರಿಧರನ್ನ
ನದಿಗಳೇ ಕಾಣಿರೇ ನದಿನಾಥಶಯನನ್ನ
ಭೃಂಗಾಳಿ ಕಾಣಿರೇ ಭೃಂಗಸಖನ
ವಾಸುದೇವನ ಕಾಣಿರೇ ವಾಸುಕಿಗಳೇ
ಸಖ್ಯನಾದ ಕುಚೇಲನ ಸಹಚರಿಯಲಿದ್ದ
ಶ್ರೀ ಕೃಷ್ಣನ ಕಾಣಿರೇಯೆಂದು ನಮ್ರ
ನರಸಲಿಲ್ಲವೆ ವನದಿ ಸದ್ಗುರು ಸುಧಾಮಾ ೧

ಬಾರೈಯ ಶ್ರೀ ಕೃಷ್ಣ ಭಕ್ತವತ್ಸಲ ರಮಾ
ಬ್ರಹ್ಮಾದಿವಂದಿತ ಬಹುಪರಾಕು
ಬಾರೈಯ ಯದುರಾಜ ಭಾನುಕೋಟಿಪ್ರಭಾ
ಭಾಸಿತದಿವ್ಯಾಂಗ ಬಹುಪರಾಕು
ಬಾರೈಯ ಕಮಲಾಕ್ಷ ಭಾಗವತಾರ್ಚಿತಾ
ಪಾದಪಂಕೇರುಹ ಬಹು ಪರಾಕು

ಬಾರೈಯ ಸರ್ವಭೂಭಾರ ದೈತ್ಯವ್ರಾತ
ಭಂಜನಾಧೌರೇಯ ಬಹುಪರಾಕು
ದೇವಕೀಪುತ್ರಬಾರೈಯ ದಿವಿಜರೊಡೆಯ
ಬಾಲಗೋಪಾಲಮಿತ್ರ ಕುಚೇಲಬಾರೊ
ಯೆಂದು ಗುರುವರ್ಯ ವನದೊಳು ಬಂದು
ಬಳಲಿಬಾಯಾರಿ ಕೂಗನೆ ಪ್ರಾಣಸಖನೆ ೨

ದ್ವಿಪದಿ —

ಓ ಬಾಲಗೋಪಾಲ ಓ ಕುಚೇಲ
ಓ ಬುಧಸ್ತುತನಾಮ ಓ ಸುಧಾಮ ೧
ಎಂದು ನಾಕೂಗಿಡಲ್ ಸಾಂದೀಪ ಓಹೋ
ಎಂದೆನಲಾಗದೆ ಇಂದು ನೀವೀಗ ೨
ಎನ್ನಾಕೆ ಪೋಗೆನಲು ಇಂಧನವ ತರಲು
ಎನ್ನಯ್ಯಗಳಿರ ನೀವೀಯರಣ್ಯ ೩
ವನು ಪೋಗಲುಚಿತವೆ ಎನಗೆ ತಿಳುಹದಲೆ
ವನಿತೆಯಳಪರಾಧವನು ಎನ್ನ ನೋಡಿ ೪
ಮಾಣಿರೈ ಬನ್ನಿರೈ ಮಾತಾಡಿರೈಯ
ಕಾಣದೆನಿಲವೆನ್ನ ಪ್ರಾಣಗಳ್ ಬಳಿಕ ೫
ನಿಮ್ಮಿಂದಲೇಶಾಂಶ ನೀತಿಗೂಣೆಯುಮಿಲ್ಲ
ಎಮ್ಮಿಂದ ವಂಚನೆ ಎಮ್ಮಿಂದ ಕೊರತೆ ೬
ಗಾಢಾಂಧಕಾರ ಮಳೆಗಾಳಿ ಸಿಡಿಲುಗಳು
ವೇಢೈಸೆಭಯದಿಂದಲೆದೆಗುಂದದಿಹಿರೆ ೭
ಕರಿಸಿಂಹಶಾರ್ದೂಲ ಗಂಡಭೇರುಂಡ
ಶರಭವೃಶ್ಚಿಕ ಸರ್ಪಚಯಭಯಗಳಿಂದ ೮
ನಿರ್ಮಾನುಷಾರಣ್ಯ ನಿಲಯದೊಳಗೆನ್ನ
ಧರ್ಮಪತ್ನಿಯನಿಂದೆಯ ಮಾಡದಿಹಿರೆ ೯

ನಿಖಿಲವಿದ್ಯವಕಲಿಸಿ ನಿಪುಣರಂಮಾಡಿ
ಸತಿಯಿಂದ ಮರುಳಾದೆ ಸಟೆಯಲ್ಲಕಡೆಗೆ ೧೦

ಭಸ್ಮದೋಳ್ ಮಾಡಿದ ಬಲುಹೋಮದಂತೆ
ಅಸ್ಮತ್ಕುಲಕೆ ಮಹದಾರ್ತಿಯಾಯ್ತಾಗ ೧೧

ಶ್ರೀಕೃಷ್ಣ ಶಿಶುವಾಗಿ ಗೋಕುಲದಲ್ಲಿ
ನೀಕ್ರೀಡೆಯೊಳಗಿರಲನೇಕ ಮೃತ್ಯುಗಳು ೧೨

ಬರಲದಂ ಪರಿಹರಿಸಿ ಬದುಕಿದೆಯೆಂದು
ಹಿರಿದಾಗಿಕಂಡವರ್ ಪೇಳೆ ಕೇಳಿಹೆನು ೧೩

ಪೂತನಿಯುಕೊಂದ ಭೂತೇಶವಂದ್ಯ
ಭೂತಪ್ರೇತಪಿಶಾಚಿ ಭೀತಿ ನಿನಗುಂಟೆ ೧೪

ಮೃಗದಭಯವುಂಟೆಂದು ಮೂರ್ಖನಾಗುವೆನೆ
ವಿಗಡವತ್ಸಾಸುರಾದಿಗಳ ಹೃಚ್ಛೂಲ ೧೫

ಪಕ್ಷಿಗಳಭಯ ನಿನಗೆ ಪ್ರಾಪ್ತವಾಗುವುದೆ
ತಿಕ್ಷಿಸಿದೆ ಬಕಮುಖ್ಯರಾಕ್ಷಸಾಧಮರ ೧೬

ಉರಗನಟ್ಟುಳಿಯುಂಟೆ ಸರಸಿಯೊಳು ಕಾಳಿ
ಉರಗನಂಗೆಲ್ದೆ ಸಾಸಿರಮೂರ್ಧ್ನಶಯನ ೧೭

ತರುಗಳಂಜಿಕೆಯುಂಟೆ ಒರಳಿಂದ ಮತ್ತೀ
ಮರಗಳನ್ನುರುಳ್ಚಿ ಗಾಂಧರ್ವರಂಗೈದೆ ೧೮

ವರುಷದಾಯಸವುಂಟೆ ವಾಸವನಿಂದ
ಸುರಿವಂಬುರಾಶಿ ಗಿರಿಯೆತ್ತಿ ಮೆರೆದೆ ೧೯

ವಾಯುವಿಂದಳುಕುಂಟೆ ವಾತಾಸುರಾರಿ
ಗಾಯಗ್ನಿಭೀತಿಯೇ ಗಹನಾಗ್ನಿಭುಕ್ತ ೨೦

ಭವಭಯಹರ ಮಹಾಭಯ ನಿವಾರಣನೆ
ವಿವಃ ಪಲ್ ನಿನಗುಂಟೆ ವಿಪಿನದೋಳ್ ಭಯವು ೨೧

ನಿನ್ನಂಥ ಸನ್ಮಿತ್ರ ನಿನ್ನಂಥ ಸಜ್ಜೀವ
ನಿನ್ನಂಥ ಬಾಂಧವನು ನಿನ್ನಂಥ ಪ್ರಿಯನು ೨೨

ನಿನ್ನಂಥ ಸತ್ಸಂಗ ನಿನ್ನಂಥ ಸಾಧು
ನಿನ್ನಂಥ ಗುಣಪೂರ್ಣನಿಧಿಯ ಸಂಗದಲಿ ೨೩

ಇರುವ ಕುಚೇಲಂಗೆ ಇನ್ನುಂಟೆ ಭಯವು
ಕರಿಯಬಾಧೆಗಳುಂಟೆ ಹರಿಯಸಾರ್ದಂಗೆ ೨೪

ಆರೋಗ್ಯಮಸ್ತು ದೀರ್ಘಾಯುರಸ್ತು
ಶ್ರೀರಸ್ತು ಶುಭಮಸ್ತು ಶೋಭನಮಸ್ತು ೨೫

ಆಗಲಿ ನಿಮಗೆ ನಾನಾವಾಗ ಕಾಂಬೆ
ಆಗದೇಯೆನಗೆ ಪುಣ್ಯಾನುಕೂಲಗಳು ೨೬

ಎಂದು ನಮ್ಮರಸುತ್ತ ಬಂದು ಗುರುವಾದ
ಸಾಂದೀಪರಳಲುತ್ತ ಶ್ರಮದಿ ಬಳಲುತ್ತ ೨೭

ಅಸಮಾನವಾದ ಶ್ರೀಮದನಂತನಂಬೆದಕಿ
ಬಸವಳಿದ ಕೌಂಡಿಣ್ಯಋಷಿಯ ಪೋಲುತಲಿ ೨೮

ಬರುತ ಯೋಚನೆಗೈದು ಪಟುತರೋನ್ನತದ
ಗುರುತರಾಶ್ವತ್ಥ ತರುವಿನಗ್ರವನು ೨೯

ತಾನೇರಿದೆಸೆಗಳಂವೀಕ್ಷಿಸುತಲಾಗ
ಕಾನನದಲಿ ನಮ್ಮ ಕಂಡ ದೂರದಲಿ ೩೦

ವಚನ—

ಈ ಪ್ರಕಾರದಿಂದ ವೃಕ್ಷಾಗ್ರವನ್ನೇರಿ ನಮ್ಮನ್ನಿರೀಕ್ಷಿಸಿ ಸಂತೋಷಚಿತ್ತನಾಗಿ ಓಹೋ ಕೃಷ್ಣ! ಎಲೋ ಕೃಷ್ಣ! ಕೃಷ್ಣಾ! ಕೃಷ್ಣಾ! ಕೃಷ್ಣೈಯ! ಕೃಷ್ಣೈಯ! ಕೃಷ್ಣಮ್ಮ! ಕೃಷ್ಣಸ್ವಾಮಿ! ಕೃಷ್ಣದೇವ! ಕೃಷ್ಣರಾಯ! ಕೃಷ್ಣಾ! ಕೃಷ್ಣಾ! ಕೃಷ್ಣಾ! ವಸುದೇವನಂದನ! ದೇವಕೀತನಯ! ನಂದಗೋಪಕುಮಾರಾ! ಯಶೋದಾನಂದನ! ಓ ಕುಚೇಲಾ! ಎಲೋ ಸುಶೀಲಾ! ಓ ಸುಧಾಮಾ! ಎಲೋ ಸದ್ಗುಣಧಾಮಾ! ಕೃಷ್ಣಮಿತ್ರಾ! ಬಾರೋ ಬಾರೈ

ಯ್ಯಾಯೆಂದು ಕೂಗಿಡುವ ಧ್ವನಿಯಂ ಕೇಳಿ ನಾವೀರ್ವರು ಸಂತಸಂಬಡುತ್ತ ಓಡಲು ಮರಸಿ ಬಂದು ಪರಮಾನಂದಭರಿತನಾಗಿ ತಕ್ಕೈಸಿ ಮುಂಡಾಡಿ ಮೂರ್ಧ್ನ್ಯವಾಘ್ರಾಣಿಸಿ ಕರೆದೊಯ್ಯನೇಮನೆಗೆ! ಇಂತಪ್ಪ ಸದ್ಗುರುಚರಣಸೇವೆ ದೊರಕಿದುದರಿಂದ ಧನ್ಯರಾದೆವು ಗುರು ಕರುಣಕಟಾಕ್ಷ ವೀಕ್ಷಣದಿಂದ ಸಕಲ ವಿದ್ಯಾಪ್ರವೀಣರಾಗಿ ಗುರುದಕ್ಷಿಣೆಗಳನ್ನಿತ್ತು ಗುರುವರನಾಜ್ಞೆಯಿಂದ ನಾವೀರ್ವರೂ ತೆರಳಿ ಪೋದಾರಭ್ಯವಾಗಿ ಇಂದು ನಿನ್ನ ಕಂಡಕಾರಣ ಗುರು ಸಾಂದೀಪರಂ ಕಂಡಂತಾಯಿತು. ಎಂದು ಇತ್ಯಾದಿ ಪೂರ್ವಪ್ರಸಂಗದಿಂದಾತನಂ ಕೊಂಡಾಡುತಿತ್ತುರುವ ಶ್ರೀ ಕೃಷ್ಣದೇವಂಗೆ ಕುಚೇಲನು ಕರಕಮಲಂಗಳಂ ಮುಗಿದು ಏನೆಂದು ಬಿನ್ನಹಂ ಮಾಡುತಿರ್ದನು —

ತ್ರಿಪದಿ:—

ಶ್ರೀರಮಾಬ್ರಹ್ಮಾದಿ ವಂದಿತ
ಸೃಷ್ಟಿಗೊಡೆಯ ಮುಕುಂದಮಾಧವ
ನೀರಜೋದರ ನಿಗಮಗೋಚರ ನಿರ್ವಿಕಾರ ೧

ಗುರುವರಗೆ ನೀ ಮೂಲಗುರು ಸ
ತ್ಪುರುಷರಿಗೆ ಪುರುಷೋತ್ತಮನು ದೇ
ವರ ಸಮೂಹಕೆ ದೇವನೀನೇ ಹರಿಮುರಾರಿ ೨

ನಿನ್ನನಾಮ ಸ್ಮರಣೆಯಿಂದಲಿ
ನಿಖಿಲಲೋಕಪವಿತ್ರವಹುದೈ
ನಿನ್ನಸಂಗದ ಮಹಿಮೆ ಪೊಗಳಲು ಎನ್ನವಶವೆ ೩

ತಿರುಕಹಾರವನಾದ ಎನ್ನಯು
ದರುಶನದಿ ನೀಧನ್ಯನೆಂತೈ
ಸರಸಿಜಾಂಬಕ ನಿನ್ನ ಮಹಿಮೆಯು ಪೊಗಳಲಳವೆ ೪

ನಿನ್ನ ಮಾಯಗಳೆಲ್ಲಬಲ್ಲೆನು
ಇನ್ನು ಸಂಶಯವಿಲ್ಲ ಎನ್ನಲಿ
ಪನ್ನಗಾರಿಧ್ವಜ ಮುರಾಂತಕ ಪಾಲಿಸೆನ್ನ ೫

ವಾರ್ಧಿಕ ಷಟ್ಪದಿ:—

ಜಯವದನಲಾವಣ್ಯ ಜಯಮಾರುತಶರಣ್ಯ
ಜಯಮಿತ್ರರುಚಿಚರಣ ಜಯಿಮಿನತನುಧರಣ
ಜಯಮುಕುಂದಸುವಪುವೆ ಜಯಮೂಲಪುರುಷಜಯ
ಜಯಮೇರುಚಾಪಮಿತ್ರ

ಜಯಮೈಥಿಲೀಪ್ರಿಯ ಜಯಮೋಕ್ಷಸಂದಾಯ
ಜಯಮೌನಿಜನಗೇಯ ಜಯಮಂಗಳ ಸಹಾಯ
ಜಯನಮಃ ಕಮಲಾಕ್ಷ ಸಕಲಲೋಕಾಧ್ಯಕ್ಷ
ಜಯವಿಬುಧ ಲೋಕರಕ್ಷ

ರಾಗ ಕಲ್ಯಾಣಿ ಅಟತಾಳ

ರಾಧಿಕಾಹೃದಯಾಂಬುಜ ಮಿಳಿಂದ
ರಕ್ಷಿಸು ದಯದಿಂದ ಪ

ರಕ್ಷಿಸೆನ್ನ ಗೋವಿಂದ ಮುಕುಂದ
ರಕ್ಷಿಸು ಮುರಳೀಧರ ಮಧುರಾಧರಾ ಅ

ನಿರ್ಜರರಿಪುಗಳ ನಿರ್ಜಿಸಿಗೋದ್ವಿಜ
ನಿರ್ಜರರನು ಪೊರೆವ ಮೂರ್ಜಗದೊಡೆಯ
ದುರ್ಜನಕಂಸಾದಿ ದುಷ್ಟದೈತ್ಯರನೆಲ್ಲ
ನಿರ್ಜೀವರನುಗೈದ ನೀರಜನಾಭ
ವರ್ಜಿಸಿದೆನೆಂದಾವನೀಶನ
ವತ್ಸರನ ದ್ರೌಪದಿಯ ಹೃದ್ಭಯ
ಭರ್ಜನಾಯಮಳಾರ್ಜುನಾಘವಿ
ಸರ್ಜನಾ ಭೀಮಾರ್ಜುನಪ್ರಿಯ ೧

ವರ್ಧೀಶನಾದ ಚತುರ್ದಶಭುವನಕೆ
ಮೂರ್ಧನ್ಯಕುಬ್ಜಾಂಗದುರ್ದೇಶಪರಿದೆ

ಕರ್ದಮಾದಿ ಮುನಿಗಣನುತ ಕುಸುಮಧ
ನುರ್ಧರಜನಕ ಮನೋಜ್ಞಭೂಷಣನೆ
ನಿರ್ಧರಿಸಿ ಸರ್ವೋತ್ತಮನು ನೀನೆಂ
ದೊದ್ದ ಭೃಗುವರಿಯನೆ ಮಹಾತ್ಮ ಜ
ನಾರ್ದನಾ ಮುರಮರ್ದನಾಯದು
ವರ್ಧನಾ ಗೋವರ್ಧನೋದ್ಧರ ೨

ಅಕ್ರೂರವರದನೆ ಚಕ್ರಗದಾಧರ
ವಿಕ್ರಮಯುಕ್ತ ಸದಾಕ್ರತುಭೋಕ್ತ
ಶುಕ್ರನಂಬಕವನ್ನು ವಕ್ರಿಸಿಬಲಿಯಿಂದ
ಲಾಕ್ರಮಿಸಿದೆ ಮೂರ್ಲೋಕವನೊಲಿದು
ಶಕ್ರಗಿತ್ತೆ ಮಹಾತ್ಮನೂತನ
ಚಕ್ರ ಖಾದ್ರಿನೃಸಿಂಹ ಕೃಷ್ಣತ್ರಿ
ವಿಕ್ರಮಧಿಕ ಪರಾಕ್ರಮಾಸರ
ಸಕ್ರಮಾಧವ ನಕ್ರಮದಹರ ೩

ಉತ್ಪಲಮಾಲಾ ವೃತ್ತ:—

ಶ್ರೀ ಕೃಷ್ಣಾ ಮುರಳೀಧರಾ ಮುರಹರಾ ಶ್ರೀಮದ್ರಮಾವಲ್ಲಭಾ
ರಾಜಾಬ್ಜಾರಿ ಮುಖಾರವಿಂದನಯನಾ ರಾಧಾಮನೋರಂಜನಾ
ಪಾಕಾರಿಸ್ತುತ ಭಕ್ತವತ್ಸಲ ಜಗತ್ಪಾಲಾ ಕೃಪಾಲೋಲ ನೀ
ನೇ ಕಾರುಣ್ಯದಿ ಪಾಲಿಸೆನ್ನನು ಸದಾ ನಿತ್ಯಾತ್ಮ ಮುಕ್ತಾಶ್ರಯಾ

ರಾಗ : ಮುಖಾರಿ ಆದಿತಾಳ

ಕೃಷ್ಣಾ ರಕ್ಷಿಸೋ ರಕ್ಷಿಸೆನ್ನನು, ರಾಮಕೃಷ್ಣ
ಕೃಷ್ಣಾನಂದಕುಮಾರ ಕೃಷ್ಣಾನವನೀತಚೋರ ಪ.
ಕೃಷ್ಣಾವಸುದೇವಬಾಲ ಕೃಷ್ಣಾ ರುಕ್ಮಿಣೀಲೋಲ
ಕೃಷ್ಣಾವಾಸುಕಿತಲ್ಪ ಕೃಷ್ಣಾ ಶ್ರೀಹರೇ ಅ.

ಅಪ್ರಾಕೃತ ಶರೀರ ಆಶ್ರಿತಮಂದಾರ
ವಿಪ್ರವಂಶೋದ್ಧಾರ ವಿಮಲಸದ್ಗುಣಹಾರ ಕೃಷ್ಣಾ ರಕ್ಷಿಸೊ॥
ಕಮಲಲೋಚನ ಕಮಲಾರಮಣ
ಕಲ್ಯಾಣಪ್ರದ ಕಬಂಧಮೋಕ್ಷದ
ಕಲುಷಸಂಹಾರ ಕನಕಾಂಬರಧರ
ಕಸ್ತೂರಿಫಾಲ ಕರುಣಾಲವಾಲ
ಕಪಟನಾಟಕ ಕದನಾದ್ಭುತಬಲ
ಕಮನೀಯಾನನ ಕರಿರಾಜಾವನ
ಕಮಲಾಸನನುತ ಕಪಿಕುಲರಕ್ಷ
ಕವಿವೃಂದಾಧಿಕ ಕಲಶಜಸನ್ನುತ
ಕಲಶಾಬ್ಧಿಶಯನ ಕಟಾಕ್ಷವೀಕ್ಷಣ
ಕಾರ್ಮುಕಹಸ್ತ ಕಾರಣವಿಗ್ರಹ
ಕಂದರ್ಪಜನಕ ಕಂಸವಿಮರ್ದನ
ಕಂಬುಗ್ರೀವ ಕೈವಲ್ಯಪ್ರದ
ಸುಪ್ರಸನ್ನ ನೀನಾದೆ ಸುಲಭಧನ್ಯ ನಾನಾದೆ
ಅಪ್ರಮೇಯ ಗೋವಿಂದ ಅಖಿಳಲೋಕೈಕವಂದ್ಯ

ದೇವಕಿವರಪುತ್ರ ದಿವ್ಯಶುಭಚರಿತ್ರ
ಭಾವಜಾಂತಕಮಿತ್ರ ಭಕ್ತಹೃತ್ಪದ್ಮಮಿತ್ರ ಕೃಷ್ಣಾ ರಕ್ಷಿಸೊ
ಅಗಣಿತಗುಣಗಣ ಅಣೋರಣೀಯ
ಅಪ್ರತಿಪುರುಷ ಅನೇಕರೂಪ
ಅಪಾರಮಹಿಮ ಅನಂತಶಯನ
ಅಮರಾರ್ಚಿತಪದ ಅಹಲ್ಯಾವರದ
ಅಕ್ರೂರಪ್ರಿಯ ಅಜಾಮಿಳರಕ್ಷ
ಅರ್ಜುನಸಖ್ಯ ಅಗಾಧಚರಿತ
ಅನಿರುದ್ಧ ಹರೇ ಅತುಲಿತಭುಜಬಲ
ಅಜರಾಮರಣ ಆಶ್ರಿತರಕ್ಷಣ

ಅನಾಥಬಂಧೋ ಅಭಯಶುಭಪ್ರದ
ಅಜ್ಞಾನದಳನ ಅನುಪಮಪಾವನ
ಅಧೋಕ್ಷಜಹರೇ ಆಪದ್ಬಾಂಧವ
ಅಂಬುಧಿತಲ್ಪಕ ಅಂಬುಧಿಬಂಧನ
ರಾವಣಾದ್ಯರಕೊಂದ ರಾಮನೀನೆಮುಕುಂದ
ಶ್ರೀವತ್ಸವನಮಾಲ ಶೃಂಗಾರಗೋಪಾಲ ೨

ಸರ್ವಂಸಹಾಭಾರ ಸಂಹಾರಯದುವೀರ
ಸರ್ವಲೋಕೋದ್ಧಾರ ಶರನಿಧಿಗಂಭೀರ ಕೃಷ್ಣಾ ರಕ್ಷಿಸೊ
ರಥಾಂಗಪಾಣೆ ರಣಜಯಚತುರ
ರಜನೀಚರಹರ ರಮಾವಿನೋದ
ರವಿಶಶಿನಯನ ರತ್ನಕಿರೀಟ
ರಸಿಕಾಗ್ರೇಸರ ರಘುಕುಲವಲ್ಲಭ
ರಾಕೇಂದುವದನ ರಾಘವಕೃಷ್ಣ
ರಾಜಶೇಖರ ರಾಧಾಲೋಲ
ರಾಜಸದೂರ ರಾಜಾನ್ವಯಭಯ
ರಾಮಾಭಿರಾಮ ರಾಮಚಂದ್ರಹರೆ
ರಾಮಭದ್ರಶ್ರೀರಾಮ ಬಲಾಂತಕ
ರಾಜೀವನಾಭ ರಾಮಸಹೋದರ
ರಮ್ಯಚರಣಯುಗ ರಂಜಿತಗಾತ್ರ
ರಂಭೋರುದ್ವಯ ರಂಗನಾಯಕ
ನಿರ್ವಾಣಪದವೀವ ನೀನೇದೇವರದೇವ
ಸರ್ವೋತ್ತಮಕೇಶವ ಸ್ವಾಮಿನೃಸಿಂಹದೇವ ೩

ವಚನ: —

ಈ ಪ್ರಕಾರದಿಂ ಸ್ತೋತ್ರವಂಮಾಡಿ ಸಾಷ್ಟಾಂಗದಂಡಪ್ರಣಾಮಂ ಗಳಾಚರಿಸಿ ಭಯಭಕ್ತಿಯುಕ್ತದಿಂ ನಿಂದಿರುವ ಕುಚೇಲನಂ ತೆಗೆದಪ್ಪಿ

ಕುಳ್ಳಿರಿಸಿಕೊಂಡು ಮಂದಸ್ಮಿತವದನಾರವಿಂದನಾಗಿ ಶ್ರೀಹರಿಯೀ ಸೆನ್ನು ತಿರ್ದನು.—

ಯಾಲಪದ:—

ಸುಮ್ಮನೆ ನೀನೀಗ ಪರಬೊಮ್ಮನೆಂದು ಸ್ತುತಿಸಿದರೆ
ಎಮ್ಮಹಸಿವು ಮಾಣಲಾಹುದೆ, ಕೇಳೈಕುಚೇಲ
ಸಮ್ಮತವೆ ಬರಿದೆ ಪೊಗಳಲು ೧

ಇತ್ತ ನಿನ್ನ ಪೋಗೆಂದ ನಮ್ಮ ತ್ತಿಗೆ ನಿನ್ನ ಕೈಲಿಯೇ
ನಿತ್ತು ಕಳುಹಿದಳು ಪೇಳೈಯ, ಕುಚೇಲ ಎನ
ಗಿತ್ತು ಪೋಗಲಾಗದೇನೈಯ ೨

ಭಟ್ಟನಂತೆಪೊಗಳಿ ಎನ್ನ ಬಿಟ್ಟದಮೇಲೆ ಕುಳ್ಳಿರಿಸಿದೆ
ಹೊಟ್ಟೆತುಂಬ ಬಲ್ಲುದೇನೈಯ, ತಂದಿದ್ದ ಗಂಟು
ಬಿಟ್ಟುಕೊಡಲು ಮನಸುಬಾರದೆ ೩

ರಿಕ್ತಹಸ್ತದಿಂದಲೆನ್ನ ಭಕ್ತರು ಬಾರರೆಷ್ಟು ವಿ
ರಕ್ತರಾದರೇನು ತಾರರೆ, ಸ್ವಲ್ಪವಾದರೂ
ಭಕ್ತಿಯೆ ಕಾರಣವಲ್ಲವೆ ೪

ಕಾಣಿಕೆ ನೀನೇನತಂದೆ ಮಾಣದೆ ಪೇಳೆನ್ನತಂದೆ
ಪ್ರಾಣಸಖನೀನಲ್ಲವೇನೋ, ಎನಗೆ ನಿನ್ನ
ರಾಣಿಯಿತ್ತು ಕಳುಹಲಿಲ್ಲವೆ ೫

ಝಂಪೆ:—

ಸಖನೆತಂದ ಪದಾರ್ಥ ಸ್ವಲ್ಪವೆಂದೆನಬೇಡ
ಪ್ರಕುತಿಯೇ ಕಾರಣವು ಭಾಗವತಜನಕೆ ೧

ಚಂದಿರಮುದೇವರಿಗೆ ಒಂದು ನೂಲೆಳೆಯಿತ್ತು
ವಂದಿಪರಿಗೆ ಕಂದುಕುಂದುಗಳುಬಹುದೆ ೨

ಬೆಟ್ಟದಷ್ಟುದೇವರಿಗೆ ಬೆಟ್ಟದಷ್ಟುಪುಷ್ಪವನು
ಮುಟ್ಟಿ ಪೂಜಿಸುವರುಂಟೆ ಮೂರುಲೋಕದಲಿ ೩

೬ ಪದ:—

ಭಕುತಿಪೂರ್ವಕಮಾಗಿ ನಿರ್ಮಲ
ಭಾವದಿಂದಲಿ ಎನ್ನದಾಸರು
ಮುಕುತದಲಿ ತೃಣಮಾತ್ರವೀಯಲು ಯೋಗ್ಯರಹರು ೧

ಒಂದು ಪತ್ರವನೊಂದು ಪುಷ್ಪವ
ನೊಂದು ಫಲವನು ಜಲವನೊಂದೇ
ಬಿಂದುಮಾತ್ರವನೀಯಲಧಿಕಾನಂದವಹೆನು ೨

ಜ್ಞಾನವಿಲ್ಲದೆ ಭಕುತಿಶೂನ್ಯರು
ಏನು ಮೇರುಸಮಾನವಿತ್ತರು
ಕಾನನದ ಬೆಳದಿಂಗಳಂದದಿ ಕಾಂಬೆನಾನು ೩

ಇಷ್ಟವಹನಿಜಕಿಂಕರರು ತಿಲ
ದಷ್ಟುಕೊಡಲತಿ ತುಷ್ಟನಾಗಿ ವಿ
ಶಿಷ್ಟಮುದದೊಳಗೀವೆ ನವರಿಗಭೀಷ್ಟಗಳನು ೪

ಏಕೆನಾಚಿಕೆ ತಂದವಸ್ತುವ
ಬೇಕೆನಲು ಕೊಡದಿಹರೆ ಮೌನವ
ಸಾಕುಮಾಡೈ ಬರಿದೆಲೋಭಗಳೇಕೆ ನಿನಗೆ ೫

೭ ಪದ:—

ಕೇಳೈಯಸಖನೆ ಕುಚೇಲನಾ ನಿನಗೆ
ಹೇಳುವೆ ಇನ್ನ್ಯಾಕೆ ಭೇದವೆನ್ನೊಡನೆ ೧

ಭಕ್ತರೆಂದರೆ ಎನ್ನ ಪ್ರಾಣಕಿಂದಧಿಕ
ಭಕ್ತರಿತ್ತುದರಿಂದ ಪರಿ ತೃಪ್ತನಹೆನು ೨

ವಿವಿಧಾವತರಾಗಳ್ ವಿಪುಲದಿಂಧರಿಸಿ
ಪ್ರವಿಮಲಾತ್ಮಕರಾದ ಭಕ್ತರಂಪೊರೆವೆ ೩

ಸಜ್ಜನರಾಗಿರ್ಪ ಸಲೆಡಿಂಗರಿಗಳ
ಲಜ್ಜೆನಾಚಿಕೆಬಿಟ್ಟು ರಕ್ಷಿಸುತಲಿಹೆನು ೪

ಪೂತಿಗಂಧಶರೀರ ಭೂಷಣನಾವೆ
ಖ್ಯಾತಿಯಿಲ್ಲದೆ ಮಹಾಕಲ್ಲನಾಂ ಪೊತ್ತೆ ೩

ಆರುಸೇರದ ಮಹಾರಣ್ಯದೊಳಗಿದ್ದೆ
ವೀರತ್ವದಿಂ ವಿಕೃತವೇಷವಂತಾಳ್ದೆ ೬

ತಿರುಕಹಾರವನಂತೆ ತಿರಿದುಂಡು ಬೆಳೆದೆ
ಅರಿತು ಸ್ವಕುಲವಿನಾಶನಾರ್ಹನಾನಾದೆ ೭

ಅಂಜದೇನಾ ಬ್ರಹ್ಮಹತ್ಯವಂಗೈದೆ
ಭುಂಜಿಸಿದೆ ಮಹಾದ್ಭುತಪಾವಕವನು ೮

ಮರೆಯಮಾತಿನ್ನೇನು ಮಾನವನ್ನುಳಿದೆ
ಉರುತರ ಪ್ರಬಲರಾವೃತನಾಗಿಮೆರೆದೆ ೯

ಸಾರವಿರಹಿತದ ನಿಜಾಚರಣೆಗಾಗಿ
ಕಾರಣವೆನ್ನ ಭಕ್ತರಪೊರೆಯಲ್ಕೈಸೆ ೧೦

ಶಬರಿಯ ಭಕ್ತಿಗೆಂಜಲನು ಭುಂಜಿಸಿಹೆ
ಪ್ರಬಲರಾಗಿಹ ಭಕ್ತಪಾಂಡವರಮನೆಯ ೧೧

ಜೀತದವನಂತೆ ಉಚ್ಛಿಷ್ಟಮುಂಬಳಿದೆ
ಪ್ರೀತಿಯಿಂ ಸ್ತ್ರೀರಿತ್ತ ಭಿಕ್ಷವಂಸವಿದೆ ೧೨

ಗೊಲ್ಲರೋಳ್ ಬೆಳೆದು ನಾಕಲ್ಲಿಗೂಳುಂಡೆ
ಬಲ್ಲಿದಕುರುರಾಯ ಪ್ರಸ್ಥವಂಮಾಡಿ ೧೩

ಕರೆಯಕಳುಹಿಸಲು ಧಿಕ್ಕಾರವಂಗೈದು
ಪರಿದೋಡಿನಾಪೋಗಿ ಭಕ್ತನಾಗಿರುವ ೧೪

ದಾಸೀಕುಮಾರನೆಂದರಿತು ಸಂಭ್ರಮದಿ
ಭಾಸುರವಿದುರನ ಪರ್ಣಶಾಲೆಯೊಳು ೧೫

ಕುಡಿತೆಪಾಲ್ಕುಡಿಯಲ್ಕೆ ಕಡಲಾಗಿಪರಿದ
ಕಡುವಿಚಿತ್ರವ ನೀನು ಕರ್ಣದೋಳ್ ಕೇಳ ೧೬

ತಂದವಸ್ತುವ ಕೊಡದೆ ಸಂದೇಹದಿಂದ
ಕಂದು ಕುಂದೆಣಿಸುತಲಿ ಕಾಲವಂ ಕಳೆದೆ ೧೭

ಎಂದು ಶ್ರೀ ಕೃಷ್ಣಸಾನಂದದಿಂ ನುಡಿಯೆ
ಮುಂದುಗಾಣದೆ ವಿಪ್ರಮುಗ್ಧನಂದದಲಿ ೧೮

ಮನದೊಳಾಲೋಚಿಸುತ ಮಾತಿಗುತ್ತರವ
ವಿನಯದಿಂದರಿಯದೆ ವಿಸ್ಮಯನಾದ ೧೯

ವಚನ:—

ಈ ಪ್ರಕಾರದಿಂದ ಶ್ರೀ ಕೃಷ್ಣದೇವರು ಹೇಳುತ್ತಿರಲು ಕುಚೇಲನು ತನ್ನೊಳು ತಾನೇನೆನ್ನುತಿರ್ದನು.—

ಕುರಕು ಝಂಪೆ —

ಮೂರುಜಗದೊಡೆಯನಿಗೆ ನಾನು ಎಂತು
ತೋರುವೆನು ಸ್ವಲ್ಪವಸ್ತುವನು ೧

ತಿರಿತಂದ ಪೃಥಕುತಂಡುಲವ ಹರಿಯು
ಕರದೊಳೆಂತಿಡಲಿ ಲಘುತರವ ೨

ಹರಿಯ ಸಭೆಯಾಗಿರುವ ಜನರು ಎನ್ನ
ಪರಿಹಾಸಕವ ಮಾಡಿದಿರರು ೩

ಎನ್ನ ಕೈಲಿರುವ ವಸ್ತುವನ್ನು ಕೃಷ್ಣ
ತನ್ನೊಳಗೆ ಎಂತು ತಿಳಿದಿಹನು ೪

ಸರ್ವಜ್ಞ ತಾನರಿಯದಿಹನೆ ಎನ್ನ
ಸರ್ವಾಪರಾಧ ಕ್ಷಮಿಸುವನೆ ೫

ತಾರದೇಬರುವುದತಿಲೇಸು ತಂದು
ತೋರದಿರ್ದಡೆ ನೀಚವೈಸು ೬

ಧರ್ಮಸಂಕಟಕೆ ಒಳಗಾದೆ ಎನ್ನ
ಮರ್ಮ ಬಯಲಾಗದೇ ಇಹುದೆ ೭

ಕಂದಃ—

ಇಂತು ಮನದೊಳಗೆ ನಾಚುತ
ಚಿಂತಿಸುತಲಿ ತಂದವಸ್ತು ಜೀರ್ಣಾಂಬರದೋಳ್
ಸಂತೈಸಿ ಕಕ್ಷಭಾಗದೋ
ಳಂತಸ್ಥನುಮಾಡಿ ತೆಗೆಯಲಂಜುತಲಿರ್ದಂ

ವಚನ:—

ಈ ರೀತಿಯಿಂದಿರುವ ಕುಚೇಲನೋಳ್ ಶ್ರೀಕೃಷ್ಣಮೂರ್ತಿಯಿಂ ನೆನ್ನುತಿರ್ದನು.—

ರಾಗ ಕಾಪಿ — ಅಟತಾಳ

ಏನುಸಖನೆ ಕುಚೇಲಮನದನುತಾಪವೇನೈ ನಿನ್ನೊಳು
ಧ್ಯಾನಿಸುವೆ ಚಿಂತಿಸುವೆಕೊಡದೆ ಕಾಣಿಕೆಯನು ೧

ಮನವಚನಕಾಯದೊಳು ಸಂಕಲ್ಪವನು ಮಾಡಿಕೊಡದವ
ಘನದುರಾತ್ಮಕನೆಂಬುದರಿಯ ವಿನಯಶೀಲ ೨

ಇಷ್ಟುನಾಚಿಕೆಯೇಕೆ ನಿನಗಿನ್ನೆಷ್ಟುಪೇಳ್ವೆನೊ ಸಖನೆ ಭಕ್ತೋ
ಚ್ಛಿಷ್ಟವಾದರು ಎನಗೆ ಪಾವನ ಶಿಷ್ಟಕೇಳೋ ೩

ವಚನ:—

ಈ ಪ್ರಕಾರದಿಂದ ಶ್ರೀಕೃಷ್ಣನು ನುಡಿದ ನುಡಿಗಳಂ ಕೇಳಿ ಕೊಡದಿರುವ ಲಜ್ಜಾಭಾವವಂ ಕಂಡು ಈ ಬಡಬ್ರಾಹ್ಮಣನ ದಾರಿದ್ರ್ಯಮಂ ನಿವಾರಿಸಲೀತನ ಪದಾರ್ಥವಂ ಸ್ವೀಕರಿಸದೇತೀರದೆಂದು ದಯಾಸಮುದ್ರನಾಗಿ ಏನುಮಾಡಿದನೆಂತೆನೆ.—

ದ್ವಿಪದಿ—

ಶ್ರೀಯುರುಸ್ಥಳದೊಳತಿ ಶೃಂಗಾರದಿಂದು
ಪಾಯದಿಂ ಮಕರಿಕಾಪತ್ರವಂಬರೆವ ೧

ಸಭಯರಾದಮರರಿಂ ಗಭಯಮಂಕೊಡುವ
ಅಭವಾದಿಗಳಿಗಮಿತ ಶುಭಗಳನ್ನೀವ ೨

ಪದುಮಶಂಖಸುಚಕ್ರ ಗದೆಗಳಂಪಿಡಿವ
ಮೃದುಪಲ್ಲವಾಬ್ಜವಂ ಮುದದಿ ಸೋಲಿಸುವ ೩
ಸರಸಿರುಹರಥಾಂಗ ಶಂಖಾದಿರೇಖೆ
ನೆರೆಸಿದ ಶುಭಲಕ್ಷಣಗಳಿಂದ ಪೊಳೆವ ೪

ಸರನ ಹರಿವಾಘೆಗಳ ನಯದಿಧರಿಸಿರುವ
ಪರಮಸುಸ್ವರಯುಕ್ತ ವರವೇಣುರಂಧ್ರ ೫
ಪರಿಯಬಲ್ಲಹ ಗೋಪಭಾಮಿನೀಜನರ
ಗುರುಪಯೋಧರ ಮರ್ದನದಿ ಪ್ರೌಢವಾದ ೬
ಕರಗಳಂನೀಡಿ ಭೂಸುರನಕಕ್ಷದೊಳು
ಪರಿಶೋಭಿಸುವ ಪರಮಪಾವನವಾದ ೭

ಖಂಡೋತ್ತರೀಯದೋಳ್ ಕಟ್ಟಿರ್ದಪೃಥುಕ
ತಂಡುಲವಬಿಚ್ಚಿ ತಾಕೊಂಡುಸಂಭ್ರಮದಿ ೮
ಮಂದಸ್ಮಿತ ಮುಖಾರವಿಂದನಾಗುತಲಿ
ಅಂದದಿಂದೆಂದನಿಂತೆಂದು ದ್ವಿಜನೊಡನೆ ೯

ತ್ರಿಪದಿ:—

ಏನುಸಖನೆ ಮಹಾನುಭಾವ ನ
ವೀನವಸ್ತುವ ತಂದುಕೊಡದಲೆ
ನೀನು ಎನ್ನನು ಬಳಲಿಸಿದೆಯನುಮಾನದಿಂದ ೧

ಮುಕ್ಕುಡಿತೆಯವಲಿಕ್ಕಿ ಎನ್ನಯ
ಮಕ್ಕಳಿಗೆ ಮಡದಿಯರಿಗೆನಗೀ
ತಕ್ಕಬಾಂಧವಜನಕೆ ಸಾಲದೆ ಅಕ್ಕರಿಂದ ೨

ಒಂದು ಕುಡಿತೆಯಪಾಲವಿದುರನು
ತಂದುಕೊಡಲದ ಕ್ಷೀರಸಾಗರ
ಕಿಂದ ಇಮ್ಮಡಿಯಾಗಲಿಲ್ಲವೆಅಂದು ಮುದದಿ ೩

ಅಕ್ಷಯನು ಹಸ್ತಸ್ಪರುಶವನು
ತತ್ಕ್ಷಣದಿಗೈಯಲು ಪದಾರ್ಥವು!
ಅಕ್ಷಯಾಕೃತಿಯೊಂದುದೊಂದಾರಕ್ಷಣದೊಳು ೪

ವಾರಿಜಾಕ್ಷನು ಓಲಗದಪರಿ
ವಾರರಿಗೆ ಸಕಲರಿಗೆ ಅಮೃತವ
ಬೀರಿದಂದದಿ ದಣಿಯಲಿತ್ತನುದಾರತನದಿ ೫

ಮಿಕ್ಕ ಅವಲಕ್ಕಿಯನು ತನ್ನಯ
ಜೊಕ್ಕೆಯಿಕ್ಕುಡಿತೆಯಲಿ ಪಿಡಿದುರೆ
ಯಕ್ಕರಿಂದಲಿ ಒಕ್ಕುಡಿತೆಸ್ವಾಮುಖಕೆ ನೆಗಹಿ ೬

ಒಪ್ಪದಲಿ ನೈವೇದ್ಯವೆನುತಾ
ಚಪ್ಪರಿಸುತಲಿ ಸವಿದುರುಚಿಯಾ
ಗಿಪ್ಪದೆಂದೆರಡನೆಯ ಮುಷ್ಟಿಯನಪ್ಪುತಿರಲು ೭

ಕಂಡು ಶ್ರೀಪತಿಯಾದ ರುಕ್ಮಿಣಿ
ಗಂಡನಾಗಿಹ ಕೃಷ್ಣದೇವನ
ಪುಂಡರೀಕವ ಪೋಲ್ವಕೈಪಿಡಿಕೊಂಡಳಾಗ ೮

ಎಲ್ಲರಿಗೆ ನೀನಿತ್ತುಮಿಕ್ಕುದ
ನೆಲ್ಲ ನೀನೇಮೆಲ್ಲಲುಚಿತವೆ
ವಲ್ಲಭನೆ ಎನಗಿಲ್ಲವೇನೈ ಫುಲ್ಲನಾಭ ೯

ವಚನ:—

ಈ ಪ್ರಕಾರ ಸರ್ವಸಾರಭೋಕ್ತನಾದ ಪರಮಾತ್ಮನು ಕುಚೇಲನಿಂದ ಪರಿಗ್ರಹಿಸಿದ ಪೃಥಕುತಂಡುಲದಲ್ಲಿ ಒಂದು ಮುಷ್ಟಿಯಂ ಸವಿದು ಎರಡನೇ ಮುಷ್ಟಿಯಂ ನಿವೇದನಮಾಳ್ಪ ಶ್ರೀಕೃಷ್ಣನ ಕರಕಮಲಂಗಳಂ ಪಿಡಿದು ಕೊಂಡು ಶ್ರೀಲಕ್ಷ್ಮಿಯಾದ ಶ್ರೀ ರುಕ್ಮಿಣೀದೇವಿಯು ಏನೆಂದು ಬಿನ್ನಹವಂ ಮಾಡುತಿರ್ದಳು —

ಅಷ್ಟಕ.—

ಶ್ರೀಹರೇ ಬ್ರಹ್ಮಾದಿವಂದ್ಯ ವಿಶೇಷಗುಣರತ್ನಾಕರಾ
ಸಾಹಸಾದ್ಭುತ ನಿತ್ಯತೃಪ್ತನಿಶಾಚರಾಂಧದಿವಾಕರಾ
ಮೋಹಿನೀಶ್ವರಶಯನ ಯಾದವವಂಶ ಜಲಧಿಸುಧಾಕರಾ
ಪಾಹಿಮಾಂಪರಮೇಶ ಶ್ರೀ ಗೋಪಾಲಕೃಷ್ಣದಯಾನಿಧೇ ೧

ಸಚ್ಚಿದಾನಂದಸ್ವರೂಪನೆ ಸರ್ವಸಾರವಿಭೋಕ್ತನೇ
ಮೆಚ್ಚಿರುವೆ ಏಕಾಂತಭಕ್ತನ ಮನದಭೀಷ್ಟೆಯ ಸಲಿಸುವೇ
ಮೆಚ್ಚಿದೊಂದೇಮುಕ್ತಿಯಾಗಿಹುದಚ್ಚಸುಖಸಂಪ್ರಾಪ್ತಿಗೇ
ಹೆಚ್ಚಿದೆರಡನೆಮುಕ್ತಿ ಸವಿದೇನೀವೆ ಕೃಷ್ಣದಯಾನಿಧೇ ೨

ನಿನ್ನಗುಣಗಳಬಲ್ಲ ಭಕ್ತರಮೆಚ್ಚಿ ನೀಮರುಳಾಗುವೆ
ಎನ್ನಲೇತಕೆ ನಿಷ್ಠುರದನುಡಿಯೆನ್ನದಿರು ಬಿನ್ನೈಸುವೇ
ಎನ್ನಕೊಡದಿರು ಎನ್ನಬಿಡದಿರು ಎನ್ನನೇತಕೆಮಾರುವೇ
ಇನ್ನುಎರಡನೆಮುಕ್ತಿ ಸವಿಯದಿರ್ಪೆ ನೃಸಿಂಹದಯಾನಿಧೇ ೩

ಸೀಸಪದ್ಯ.—

ಜನಕನಾಭವನವಂ ಸಾರ್ದುನಾನಿರುವೆನೆ
ಅಮಿತಭಂಗಾಗಾರನಾದನಾತ
ಜನನಿಯು ನೆರೆನಂಬಿ ಸಂತೋಷವೆಸೆವೆನೆ
ಒಬ್ಬಳಲ್ಲವನೇಕವಾದ ರೂಪು
ಒಡಹುಟ್ಟಿದನ ನಂಬಿ ಮಹಿಲದೊಳಿರುವೆನೆ
ಕ್ಷಯರೋಗಿಯೆಂತೆಂಬ ಸದರವಾಯ್ತು
ಭಗಿನಿಯನ್ನೆರೆನಂಬಿ ಬದುಕುವೆನೆಂಬೆನೆ
ಬಡತಿಯಾದವಳೆನ್ನಪಾಲಿಸುವಳೆ
ಎಂದು ಮುನ್ನಿನಜನ್ಮದೊಳ್ ನೊಂದು ನಾನು
ಜನಕ ಭೀಷ್ಮನಬಸುರಲ್ಲಿ ಜನ್ಮವಾಂತು
ಅತನೊಲ್ಲದೆ ನಿನ್ನಪಾದಾರವಿಂದ
ವನ್ನುಮರೆಹೊಕ್ಕೆ ಮಾರದಿರೆನ್ನಕೃಷ್ಣ

ವಚನ—

ಈ ಪ್ರಕಾರದಿಂದ ನುಡಿದು ಶ್ರೀ ಹರಿಪಾದಪದ್ಮಂಗಳಂ ಪಿಡಿದು ಗಡಗಡನೆ ನಡುಗುವ ಮಡದಿಯೊಡನೆ ಜಗದೊಡೆಯನೇನೆನ್ನುತಿರ್ದನು —

ತ್ರಿಪದಿ —

ಮಾಯಕಾತಿಯೆ ಮರುಳು ರುಕ್ಮಿಣಿ
ನೋಯಿಸಿದೆ ದಾರಿದ್ರ ದುಃಖದಿ
ದಾಯಿಗನಪರಿ ಎನ್ನ ಭಕ್ತನ ಆಯತಾಕ್ಷಿ ೧

ಕಟಕಟಾ ನಿನ್ನಂಥ ನಿಷ್ಠುರ
ಕಠಿಣಚಿತ್ತರಕಾಣೆ ಭಕುತನ
ಪಟುತರದಿ ಬಳಲಿಸಿದೆ ಬರಿದೇ ಬಡತನದೊಳು ೨

ನಾರಿ ಬಿಡುಬಿಡು ಕರವ ನಿನ್ನನು
ಮಾರಿದೆನು ಮಾರಿದೆನು ಸಾರೆಲೆ
ನೀರೆ ನೀನೆನಗರಸಿಯಲ್ಲ ವಿಚಾರಿಸುವರೆ ೩

ಎನ್ನ ಭಕ್ತರು ನಿನಗೆ ನೋಡಲು
ಅನ್ಯರೆಂದೇ ಅಶನವಸನಕೆ
ಬನ್ನ ಬಡಿಸುವೆ ದೈನ್ಯಗೊಳಿಸುವೆ ಗನ್ನಗಾತಿ ೪

ವಿಧಿಸಿ ನೋಡಲು ಭಕುತಗಿಂದತಿ
ಅಧಿಕಳೇ ನೀನೆನಗೆ ಯೋಚಿಸೆ
ವಿಧುವದನೆ ನೀನೆನ್ನ ಹೃದಯದ ಬಗೆಯನರಿಯ ೫

ವಚನ.—

ಈ ಪ್ರಕಾರದಿಂದ ಮನಮುನಿಸುತೋರುವಂದದಿ ನುಡಿದ ರಮಾರಮಣನೊಡನೆ ಬಡನಡುವಿನ ಕುಡಿತೆಗಂಗಳ ಕಡುಚೆಲ್ವೆಯಾದ ಮಡದಿ ಗಡಗಡನೆ ನಡುಗುತ್ತ ಏನೆನ್ನುತಿರ್ದಳು.—

ಝಂಪೆ:—

ಎನ್ನ ಭಜಿಸುವುದಿಲ್ಲ ಎನ್ನ ಪೂಜಿಸುವುದಿಲ್ಲ
ನಿನ್ನ ಭಕುತರಗುಣವ ನಿನ್ನೇನಪೇಳ್ವೆ

ನಿನ್ನನರ್ಚಿಪದಾಸರೆನ್ನ ಕಡೆಗಣ್ಣಿಂದ
ಚೆನ್ನಾಗಿನೋಡರ್ಪೈ ಪನ್ನಂಗಶಯನ ೨
ನಾನೇನುಮಾಡುವೆನು ನನ್ನಿಂದಲಪರಾಧ
ವೇನುಂಟು ತೋರೆನಗೆ ಶ್ರೀನಿಕೇತನನೆ ೩
ಕರವಬಿಡಹೇಳಿ ನೀಬರಿಯ ಮುನಿಸೆನ್ನೊಡನೆ
ಕರುಣಿಪರೆ ಸರ್ವಸಿನಗರಿಕೆಯುಂಟೈಸೆ ೪
ಸರ್ವಜ್ಞಚಿತ್ತವಹ ಸರ್ವೇಶನಾನಿನಗೆ
ಸರ್ವಾಪರಾಧಗಳ ಸಲಹೋ ಸರ್ವೇಶ ೫

ವಚನ —

ಇಂತೆಂದ ಇಂದಿರೆಯೊಡನೆ ಶ್ರೀ ಗೋವಿಂದನೇನೆನ್ನುತಿರ್ದನು.—

ದ್ವಿಪದಿ.—

ಕೇಳು ಭೀಷ್ಮನಪುತ್ರಿ ಕೇಳಬ್ಜನೇತ್ರಿ
ಪೇಳುವೆ ಎನ್ನ ಸತ್ಪ್ರಿಯ ಭಕ್ತಜನರು ೧
ಭಜಿಸಿ ನಿನ್ನರ್ಚಿಪರೆ ಪರತತ್ವವೆಂದು
ನಿಜವಾಗಿ ಮನ್ನಿಪರೆ ನಿನ್ನಸಂಪದವ ೨
ಹೊನ್ನುಹೊಸ್ತಿಲೊಳಿರಲು ಧಾನ್ಯವಂತಿರಿದು
ತಿನ್ನುವರುಂಟೇನೆ ಪನ್ನಂಗವೇಣಿ ೩
ಎನ್ನ ನಿಷ್ಕಾಮದೋಳ್ ಸನ್ನುತಿಯವಾಳ್ವ
ಧನ್ಯರು ಭಜಿಪರೆ ಅನ್ಯದೇವತೆಯ ೪
ಭಕುತಿ ಎನ್ನೊಳಗಾಂತು ಪರಮನಿಸ್ಪೃಹದಿ
ಮುಕುತಿಯಂ ಪಡೆವ ಸನ್ಮೋಹಮಂಮಾಣ್ದು ೫
ನಿನ್ನಭಾಗ್ಯವಪಡೆವ ನಿತ್ಯಸಂಸಾರ
ವಿನ್ನಪೇಕ್ಷಿಪರುಂಟೆ ವನಜಾತಗಂಧಿ ೬
ಇದನರಿತು ನೀನೆನ್ನಪದದ ಶರಣರನು
ಮುದದಿಂದಸಂತೈಸು ಮುಕುರಕಪೋಲೆ ೭

ಕಾಮ್ಯಯೋಗವಬಿಟ್ಟು ಜ್ಞಾನಯೋಗದಲಿ
ಸೌಮ್ಯಭಾಗದೊಳಿರ್ಪ ಸದ್ಭಕ್ತರುಗಳು ೮
ಮಾನಸದಲಿ ಮಾಳ್ಪಧ್ಯಾನಕ್ಕೆಮೆಚ್ಚಿ
ನಾನಾಗಿಕರಗುವೆನು ನವನೀತದಂತೆ ೯

ಜನನಿಶಿಶುವನು ನೆನೆವಚೆಂದದಿಂನಾನು
ಮನವೊಲಿದುರಕ್ಷಿಪೆನು ಮಡದಿಎನ್ನವರ ೧೦
ತವಕದಿಂ ದಶಾವತಾರಾದ್ಯನಂತ
ಅವತಾರಗಳಧರಿಸಿ ಆತ್ಮಭಕ್ತರನು ೧೧

ರಕ್ಷಿಪೆನಾನಾಗಿ ರಮಣಿನೀನವರ
ರಕ್ಷಿಸದೆ ಮನ್ನಿಸದುಪೇಕ್ಷೆಯಂಮಾಡಿ ೧೨
ಅಂತರಂಗದಿ ಮಹಾಚಿಂತೆಯಂ ಬಡಿಸಿ
ಕಾಂತೆನೀಬಳಲಿಸುವೆ ಕಡುದರಿದ್ರದಲಿ ೧೩

ಎಂದುಶ್ರೀಕೃಷ್ಣ ಸಾನಂದದಿಂನುಡಿಯೆ
ನೊಂದುಮನದಲಿ ಭೀಷ್ಮನಂದನೆಯಾಗ ೧೪
ಅಪರಾಧವೆನ್ನಿಂದಲಾಯ್ತು ಪ್ರಾಣೇಶ
ಕೃಪೆಮಾಡಿಸಲಹೆಂದು ವಿಪುಲಭಕುತಿಯಲಿ ೧೫

ಜಲಜದಂದದಲಿರುವ ಚರಣಯುಗಳದಲಿ
ತಲೆವಾಗಿಬಹುವಿಧದಿ ಲಲನೆಪ್ರಾರ್ಥಿಸಲು ೧೬
ತರುಣಿಯಾರ್ಥಿಯುಸಲಿಸೆ ಕರುಣಾಸಾಗರನು
ಕರದಲಿರ್ದವಲಕ್ಕಿ ಕಡೆಗಿಟ್ಟುನಗುತ ೧೭

ಕಾಂತೆಯಂಸಂತೈಸಿ ಘನಕುಚೇಲನನು
ಅಂತರಂಗದಿ ಬಹಳಸಂತೋಷವೆರೆಸಿ ೧೮
ವಾಲಗದೊಳಿರುವ ದೇವಾದಿಪರಿವಾರ
ಜಾಲವಂ ತಮ್ಮನಿಜಾಲಯಂಗಳಿಗೆ ೧೯

ಕಳುಹಿ ಕುಚೇಲನಂ ಕೈಪಿಡಿದು ಮುದದಿ
ಒಲಿದು ರಾಣೀವಾಸದುಚಿತ ಸೇವೆಯೊಳು ೨೦

ಪರಮಾತ್ಮನಾದ ಶ್ರೀಧರನಾರಸಿಂಹ
ಪರಮಸೌಯಸಾರ್ದ ನಿತ್ಯಾನಂದದಿಂದ ೨೧

ವಾಕ್ಯ —

ಈ ಪ್ರಕಾರದಿಂದಂತಃಪುರ ಪ್ರವೇಶವಂ ಮಾಡಿ ಶ್ರೀ ಕೃಷ್ಣರಾಯ ರುಕ್ಮಿಣಿಯೊಡನೇನೆನ್ನುತಿರ್ದನು —

ಮಾಲಪದ:—

ಇಂದುಮುಖಿಯೆನ್ನ ಪ್ರಾಣದಂಗಸಖನಿಂದು ತಾನು
ಬಂದನಪರೂಪದಿಂದಲಿ, ಇವನಿಗಾಗಿ
ಇಂದು ಮಾಡಿಕಳುಹಲುಚಿತವು ೧

ಸೀನೇ ಮಿಂದು ಮಡಿಯನುಟ್ಟು ನಾನಾವಿಧ ಭಕ್ಷ್ಯಭೋಜ್ಯ
ನೂನವಿಲ್ಲದಂತೆ ಪಾಕವ, ಮಾಡೆಂದು ಮನದಿ
ಶ್ರೀನಿವಾಸನಿರೂಪಿಸಿದ ೨

ಪಡಗರದಿಂದ ರುಕ್ಮಿಣಿ ನಡೆದು ಮಿಂದು ಮಡಿಯನುಟ್ಟು
ಅಡುಗೆಯನ್ನು ಮಾಡುತಿರ್ದಳು, ಶ್ರೀ ಕೃಷ್ಣರಾಯ
ನುಡಿದನಾಗ ಪ್ರಾಣಸಖನೊಳು ೩

ಕಂ. ಪ.—

ಮಜ್ಜನವ ಮಾಡಲೇಳ್ಳೆ
ಸಜ್ಜನಕುಲತಿಲಕ ಎಂದು ಸಂತಸದಿಂದಲ್
ಸಜ್ಜೆಯನಿಳಿದೀರ್ವರು ವರ
ಮಜ್ಜನಶಾಲೆಗೆ ನಡೆದರು ಮುರಹರವಿಪ್ರರ್ ೧

ಭಂಗಾರದಿಂದ ರಚಿಸಿದ
ಗಂಗಾಳದಿ ಉಷ್ಣವಾದ ಗಂಗಾಜಲವಂ
ಶೃಂಗಾರದಿ ಸತ್ಯಭಾವೆ
ರಂಗಗೆ ಕುಚೇಲಂಗೆರದಳತಿ ಸಂಭ್ರಮದೋಳ್ ೨

ತ್ರಿಪದಿ:—

ಉಟ್ಟುಪೊದ್ದುರುಮಡಿಗಳಾಗಿಹ
ಪಟ್ಟುಪಟ್ಟಾವಳಿಯನಾಕ್ಷಣ
ಉಟ್ಟು ಪೀತದಿ ಕುಳಿತರಸುರಘರಟ್ಟ ದ್ವಿಜರು ೧

ಒಟ್ಟಿಕುಚಿ ಕಾಳಿಂದಿರಮಣದ
ತಟ್ಟೆ ತಂಬಿಗೆ ಪಂಚಪಾತ್ರೆಯು
ಪೆಟ್ಟಿಗೆಯು ಶುದ್ಧೋದಕವು ತಂದಿಟ್ಟಳಾಗ ೨

ಅತುಲದ್ವಾದಶನಾಮ ಮುದ್ರಾಂ
ಕಿತದಿ ಶೋಭಿತಮಂತ್ರಯುಕ್ತದಿ
ನುತಿಪಮಾಧ್ಯಾಹ್ನಿಕವ ರಚಿಸಿದರತಿ ಹಿತದಲಿ ೩

ದೇವತಾರ್ಚನೆ ವೈಶ್ವದೇವವು
ಪಾವನದ ಬಲಿಹರಣ ಮುಖ್ಯವ
ಸಾವಧಾನದಿ ಮಾಡಿದನು ಶ್ರೀದೇವಿಯರಸ ೪

ಭೂದಿವಿಜನಾಗಿಹ ಕುಚೇಲನ
ಪಾದಪ್ರಕ್ಷಾಳನವಗೈದತಿ
ಮೋದದಿಂದಲಿ ಕುಳ್ಳಿರಿಸಿದನು ಯಾದವೇಂದ್ರ ೫

ಸ್ವರ್ಣಮಯವಾಗಿರುವ ಕದಳೀ
ಪರ್ಣರಚನ ದ್ರೋಣಗಳನು ಸು
ಪರ್ಣವಾಹನ ಮಂಡಿಸಿದ ಕಸ್ತೂರಿಗಂಧ ೬

ದೇವಕೀ ವಸುದೇವ ಗೋಪೀ
ದೇವಿ ನಂದನು ಸಾತ್ಯಕೀ ಬಹು
ಪಾವನರು ಯಾದವರು ಕುಳಿತರು ಭಾವದಿಂದ ೭

ಪುತ್ರಪೌತ್ರರು ಬಾಂಧವರು ಸ
ನ್ಮಿತ್ರರತಿಥಿಗಳಾದ ಯೋಗ್ಯರು
ಪತ್ರಭಾಜನದೆಡೆಯ ಸಾರ್ದರು ಚಿತ್ರವೆನಲು ೮

ಪ್ರೋಕ್ಷಿಸ ಸಾಲಿಗ್ರಾಮ ತೀರ್ಥವ
ತುಳಸಿದಳವಂಗಾರವನು ಪರಿ
ಮಳದ ಗಂಧಾಕ್ಷತೆಯ ನಿತ್ತನು ನಳಿನನಾಭ ೯

ವಚನ —

ಇಂತು ಶ್ರೀ ಕೃಷ್ಣದೇವರು ಕುಚೇಲನಂ ಪುರಸ್ಕರಿಸಿ ಸಮಸ್ತರಂ ಕುಳ್ಳಿರಿಸಿ ಸಂಕಲ್ಪಪೂರ್ವಕವಾಗಿ ಪಾತ್ರಾಭಿಗಾರವಂ ಮಾಡಿಸಿ ಪದಾರ್ಥಂಗಳಂ ಬಡಿಸೆಂದು ಮಡದಿಯಾದ ರುಕ್ಮಿಣಿಯೊಡನೆ ನಿರೂಪಿಸಲು ಷಡ್ರಸಾನ್ನಗಳಂ ಬಡಿಸುತಿರ್ದಳದೆಂತೆನೆ.—

ಪದ

ದಿವ್ಯಾಂಬರವನುಟ್ಟು ದಿವ್ಯಕಂಚುಕವ
ಭವ್ಯದಿಂದಲಿ ತೊಟ್ಟು ಬಹುತರಾಭರಣ ೧
ಗಳನಲಂಕರಿಸಿ ಪುತ್ಥಳಿಬೊಂಬೆಯಂತೆ
ಥಳಥಳಿಸುತಲಿ ಸೆರಗನಳವಡಿಸಿ ಮುದದಿ ೨
ಬಡನಡುವು ಗಡಗಡನೆ ಬಳುಕುತಡಿಯಿಡಲು
ನುಡಿವ ಕಿರುಗೆಜ್ಜೆ ಘೊಂದೊಡರು ಮಂಜೀರ ೩
ಘಲು ಘಲೂರೆನೆ ಯುಗಳಕರಕಂಕಣಾದಿ
ಸಲೆಭೂಷಣಗಳು ಝುಂಝುಣವೆಂಬ ನಿನದ ೪
ಪೂರೈಸೆ ಕರ್ಪೂರನಾರಡಿಂಡೀರ
ಶಾರದ ನಾರದ ಚಾರುಸ್ವಚ್ಛಗಳ ೫
ನಿಂದಿಸುವ ಲವಣವಾನಂದದಿಂ ತಂದು
ಮಂದಯಾನದಿ ಬಂದು ಮುದದಿ ಬಡಿಸಿದಳು ೬
ನಿಂಬೆ ಹೇರಿಳೆ ಮಾವು ನಿರ್ಮಲಾಮಲಕ
ಸಂಭಾರಮಯ ದ್ರಾಕ್ಷೆ ಸ್ವಾದು ಖರ್ಜೂರ ೭
ಅಲ್ಲ ಮಾಗಳಿ ಬದರಿ ಬಿಲ್ವಮಾದಳದ
ಸಲ್ಲಲಿತದಾಮೋದ ಷಡ್ರುಚಿವೀಚಿ ೮

ಒಪ್ಪವಂದದೊಳಿವು ಉಪ್ಪಿನಕಾಯಿ
ತಪ್ಪದೆ ಎಡೆಗೆ ತಾ ತಂದು ಬಡಿಸಿದಳು ೯

ಕೆಚ್ಚಡಿಗಳು ಅನೇಕಗಳಾದ ರುಚಿಯ
ಪಚ್ಚಡಿಗಳಂ ತಂದು ಬಾಲೆ ಬಡಿಸಿದಳು ೧೦

ಸುರಿದ ತೆಂಗಿನವಲದಿ ಬೆರೆದ ಕೆನೆಸೊಸರು
ಸರಿಸರಿಯಾದ ಒಗ್ಗರಣೆಗಳಂ ರಚಿಸಿ ೧೧

ಕಡಲೆ ಪೆಸರುಗಳವಿಂಗಡಿಸಿ ಪರುರಸಿಸಿ
ಷಡುರಸಾಯನದಿಂದ ಸಮವಿಲ್ಲದಿಪ್ಪ ೧೨

ಇಂಬಾದ ವಿವಿಧಕೋಸಂಬರೀಶತವ
ಹೊಂಬಟ್ಟಲಿಂದ ಜಗದಂಬೆಬಡಿಸಿದಳು ೧೩

ನಾನಾವಿಧವಾದ ನವ್ಯತರಮಾದ
ಮಾನಿತರುಚಿಯಿಂ ಸಮಾನವಿರಹಿತದಿ ೧೪

ಪಾಕವಂಮಾಡಿದ ಬಗೆಬಗೆಗಳಾದ
ಶಾಕಂಗಳನು ಮುದನಜನಿಸಿ ಬಡಿಸಿದಳು ೧೫

ಗೌಳಿಸೇವಿಗೆಫೇಣಿ ಗೋಧೂಮಮುಖ್ಯ
ಮೇಲಾದಪಾಯಸವ ಬಾಲೆಬಡಿಸಿದಳು ೧೬

ಪೂರಿಗೆಕಡಬು ಯಣ್ಣೂರಿಗೆದೋಸೆ
ತೋರಗೂಳೂರಿಗೆ ತೊಳಿಪಗರುಗೊಡೆಯು ೧೭

ಕಜ್ಜಾಯವತಿರಸವು ಕಣಕದ್ಧಾರಣಿಡ
ಸಜ್ಜಿಗೆಯಹೋಳಿಗೆಯು ಸವಿಯುಂಡಿಗೆಂಚೆ ೧೮

ಮೊದಲಾದಭಕ್ಷ್ಯಗಳ ಮುದವಿಂದತಂದು
ಸದುಮಾಕ್ಷಿರುಕುಮಿಣಿಯು ಬಡಿಸಿದಳಾಗ ೧೯

ಚಿತ್ರಾನ್ನ ಕ್ಷೀರಾನ್ನ ತಿಂತ್ರಿಣೀಯನ್ನ
ತತ್ರದಧ್ಯಾನ್ನ ವಿವಿಧಗುಡಾನ್ನ ೨೦

ಸದ್ಯೋಘೃತಾನ್ನ ರಾಜಾನ್ನ ಶಾಲ್ಯನ್ನ
ಹೃದ್ಯಾಮಿಷಾಚೂರ್ಣ ವಿತತದಿವ್ಯಾನ್ನ ೨೧
ಮುದ್ಗಾನ್ನ ಪರಮಾನ್ನ ಮುಖ್ಯಾನ್ನಗಳನು
ಸದ್ಗಮನದಿಂತಂದು ಚದುರೆಬಡಿಸಿದಳು ೨೨

ಹಪ್ಪಳವು ಸಂಡಿಗೆಯು ಹಾಲುಕೆನೆಮೊಸರು
ತುಪ್ಪ ಸಕ್ಕರೆ ಜೇನುತುಪ್ಪ ಪಾಸಕವು ೨೩
ಘೃತದಿಂದ ಪಕ್ವಮಾದತುಳಗರುಗೋಡೆಯು
ಹಿತಮಾದ ಸೂಪಸಂಯುತದಿ ಬಡಿಸಿದಳು ೨೪

ನೀರಮಜ್ಜಿಗೆ ಹಲಸು ನಿಂಬೆಸುಲಿದಕದಳಿ
ನಾಗಸೀಕರಣೆಯು ಪಂಚಾಮೃತವೆಂಬ ೨೫
ಗೊಜ್ಜುಮಜ್ಜಿಗೆಪಳದ್ಯ ಸಜ್ಜಾದವಸ್ತು
ಮೂಜ್ಜಗನ್ಮಾತೆಯು ಮುದದಿಬಡಿಸಿದಳು ೨೬

ಸಕಲಮಾದಪದಾರ್ಥ ಸಂತಸದಿಂದ
ರುಕುಮಿಣೀದೇವಿ ಕಾರುಣ್ಯದಿಂತಂದು ೨೭
ಬಡಿಸಿದ ಎಡೆಗಳಂ ಭಕ್ತವತ್ಸಲನು
ಕುಡಿತೆ ಗಣ್ಣಲಿನೋಡಿ ಕುಳಿತಿರದೆದ್ದು ೨೮

ವಿಪ್ರಗಾಪ್ರೋಶನವನಿತ್ತು ಭಕುತಿಯಲಿ
ಅಪ್ರಮೇಯ ನೃಸಿಂಹಾರ್ಪಣಮಸ್ತು ೨೯
ಎಂದು ಹಸ್ತೋದಕವನಿತ್ತು ಕುಳ್ಳಿರ್ದು
ಚೆಂದದಿಂದಲಿ ದ್ವಿಜನನುಜ್ಞಾಪೂರ್ವಕದಿ ೩೦

ಆಪೋಶನವನಾಂತು ಅಂತರಾತ್ಮಕನು
ಸಾಪೇಕ್ಷಿತಪದಾರ್ಥ ಶಾಕಪಾಕಾದಿ ೩೧
ಅಪ್ರಾಕೃತಾನ್ನವನಾರೋಗಿಸುತಲಿ
ವಿಪ್ರೋಪಗುಪಚಾರ ವಿವಿಧ ಪೇಳುತಲಿ ೩೨

ಚಪ್ಪರಿಸುತಲುಣುತ ಷಡುರಸಾನ್ನವನು
ತಪ್ಪುಗಳೆಣಿಸುತಲಿ ತರುಣಿರುಕ್ಮಿಣಿಯು ೩೩

ಆರೋಗಣೆಯಮಾಡಿ ಸಾರಸನಾಭ
ವಾರಣೆಗೈದವರ ಪಙ್ಕ್ತಿಯಂನೋಡಿ ೩೪

ಉತ್ತರಾಪೋಶನವನ್ನೆತ್ತಿ ಕೈಗೊಳುತ
ಚಿತ್ತಜನಪಿತ್ತಯ್ಯ ಚಿತ್ತಸಂಭ್ರಮದಿ ೩೫

ಎಲ್ಲರಿಂದಲಿಕೂಡಿ ಎದ್ದುಕರಚರಣ
ಪಲ್ಲವಂಗಳತೊಳೆದು ಬಂದುಮಂಟಪದಿ ೩೬

ಕುಳಿತುಕರ್ಪೂರ ಪರಿಮಳಯುಕ್ತವಾದ
ತಳಿತ ತಾಂಬೂಲಸ ದಕ್ಷಿಣಾದಿಗಳ ೩೭

ನಿತ್ತೆಲ್ಲರಂಕಳುಹಿ ಉತ್ತಮಶ್ಲೋಕ
ನತ್ಯಂತಮುದದಿಂದ ಮಿತ್ರಾಗ್ರಣೀಸಹಿತ ೩೮

ವೀಳ್ಯಮೆಲ್ಲುತಲಿ ವೇದಾಂತವೇದ್ಯ
ಲಾಲಿತ ಸರಸಸಲ್ಲಾಪಂಗಳಿಂದ ೩೯

ನೃತ್ಯಗೀತಗಳಿಂದ ಸತ್ಯಸಂಕಲ್ಪ
ಹೊತ್ತುಕಳೆಯುತಲಿರ್ದನತ್ಯಂತಮುದದಿ ೪೦

ವಚನ —

ಇಂತು ಮಜ್ಜನಭೋಜನಾದಿ ಉಪಚಾರಗಳಿಂದ ದಿವಸವಂ ಕಳೆದು ಸಂಧ್ಯಾಕಾಲದೊಳ್ ಸಾಯಂಸಂಧ್ಯಾವಂದನಾದಿ ಸತ್ಕರ್ಮಂಗಳಾಚರಿಸಿ ರಾತ್ರಿ ಕುಚೇಲನಂ ಕೂಡಿ ಸಹಪಙ್ಕ್ತಿಭೋಜನವಂಮಾಡಿ ಹಂಸತೂಲಿಕಾ ತಲ್ಪದೋಳ್ ಸಖನಂ ಮಲಗಿಸಿ ನಿದ್ರಾಲಿಂಗನಾಗುವನ್ನಕ ಪಾದಂಗಳಂ ಸೇವಿಸಿ ಬಳಿಕೆದ್ದು ನಿಜಕೇಳಿಕಾ ಮಂದಿರದೋಳ್ ನಿಜಾಂಗನಾಸಂಗದೋಳ್ ಪವಡಿಸಿ ಸೂರ್ಯೋದಯಾತ್ಪೂರ್ವದಲ್ಲಿ ಉಪ್ಪವಡಿಸಿ ಸ್ನಾನಸಂಧ್ಯಾವಂದನಾದಿ ನಿತ್ಯಕರ್ಮಂಗಳಂ ತನ್ನೊಡಗೂಡಿ ರಚಿಸಿದ ಶ್ರೀಕೃಷ್ಣನಾದ ಸಾಕ್ಷಾತ್ಪರಮಾತ್ಮನೊಡನೆ ಸುಧಾಮನೇನೆನ್ನುತಿರ್ದನು.—

ಶ್ಲೋಕ —

ಜಯಜಯಪರಮಾತ್ಮಾ ಸರ್ವಜೀವಾಂತರಾತ್ಮಾ
ಜಯಗುಣ ಪರಿಪೂರ್ಣಾನಂತ ಸನ್ಮೋಘವರ್ಣಾ
ಕ್ಷಯರಹಿತರಮೇಶಾ ಸಾರಸಾಪ್ತಪ್ರಕಾಶಾ
ಭಯಹರಣಖಗೇಂದ್ರಾ ಪಾಹಿಮಾಂಯಾದವೇಂದ್ರಾ

ರಾಗ ಘಂಟಾ ಅಟತಾಳ

ಜಯಜಯಮಾಧವ ಜಯಜಯಕೇಶವ
ಜಯ ಯದುಕುಲರಾಜ
ಜಯಜಯ ಶ್ರೀಧರ ಜಯಜಯ ಭೂಧರ
ಜಯ ಮಮಸುರಭೂಜ ೧

ಪಂಕಜಲೋಚನ ಪಾಪವಿಮೋಚನ
ಶಂಕರನುತನಾಮ
ಕಿಂಕರಲೋಕದ ಸಂಕಟಹರಣಾಕ
ಳಂಕ ಸುಗುಣಧಾಮ ೨

ನಿನ್ನಯ ಶುಭಪದನೀರಜ ದರುಶನ
ವನ್ನು ಹರುಷದಿಂದ
ಕಣ್ಣಾಲಿಕಂಡೆ ಪ್ರಸನ್ನದಿ ನಾ ಕಡು
ಧನ್ಯನು ಗೋವಿಂದ ೩

ಎನ್ನಯ ಪ್ರಾರಬ್ಧಾದಿ ದುರಿತಗಳು
ಭಿನ್ನವಾಯಿತು ಹರಿಯೆ
ಪನ್ನಂಗಶಯನಾಪನ್ನವರದಸುರ
ಸನ್ನುತ ನರಹರಿಯೆ ೪

ಅಂಗಜಜನಕ ವಿಹಂಗಾರೋಹಣ
ರಂಗನಾಥಶೌರಿ
ಮಂಗಳಫಲವ ಶುಭಾಂಗ ಬಾದ್ರಿನರ
ಸಿಂಗ ಶ್ರೀಮುರಾರಿ ೫

ಉತ್ಪಲಮಾಲಾ ವೃತ್ತ:—

ಶ್ರೀಕರ ಭಕ್ತವತ್ಸಲ ಶುಭಾಕರ ಕಂಸವಿದಾರ ದಿವ್ಯರ
ತ್ನಾಕರತಲ್ಪಮಾಧವ ದಯಾಕರ ಪಾಪವಿದೂರ ಸರ್ವಲೋ
ಕಾಕರಪಾಲ ದೈತ್ಯರಣಭೀಕರ ಚಕ್ರದರಾಬ್ಜನಾಭ ಶೋ
ಭಾಕರಪಾದಪಂಕಜ ದಿವಾಕರ ಸನ್ನಿಭ ಕೃಷ್ಣ ಪಾಹಿಮಾಂ

ರಾಗ ಮಾಡಿ ಅಟತಾಳ

ಪಾಲಿಸುಬಿನ್ನಹ ಇನತೇಜ, ಕೃಷ್ಣ
ಪಾಲಿಸನುಜ್ಞೆಯ ಯದುರಾಜ ಪ

ಪೋಗಿಬರಲೆನಾನೂರಿಗೆ, ಕರುಣಾ
ಸಾಗರಮಾಧವ ಜಗದೀಶ
ನಾಗಶಯನ ಎನ್ನಾದರಿಸಿದೆ ಅನು
ರಾಗದಿ ಕೇಶವಪರಮೇಶ ೧

ಸಂಭ್ರಮವಾಯಿತು ಚರಣದರುಶನದಿ
ಕಂಬುಗದಾಧರ ಕಮಲಾಕ್ಷ
ಅಂಭುಜಭವ ಮುಖರರಿಯದ ನಿನ್ನಪ
ದಾಂಬುಜಕಂಡೆ ದುರಿತಶಿಕ್ಷ ೨

ಧನ್ಯನಾದೆನು ಉದಗ್ರಭಕ್ತರೊಳು
ಮಾನ್ಯನಾದೆನು ಮಧುಸೂದನ
ನಿನ್ನನ್ನು ಸ್ತುತಿಸೆ ಸಮರ್ಥನೇ ಫಣಿಪ
ಪನ್ನಂಗಶಯನ ಶುಭಕಥನ ೩

ದೇವರದೇವನೆ ದೀನಮಂದಾರನೆ
ಭಾವಿಸಿ ಎನಗಿಹಪರವಿತ್ತೆ
ಸೇವಕನೆನ್ನದೆ ಸರಿಸಮನೆನಿಸಿಹೆ
ಪಾವನಗೈದು ಕೀರ್ತಿಯಪೊತ್ತೆ ೪

ಅಪ್ಪಣೆಯಾದರಗ್ರಹಾರಕೆ, ಪೋಗಿ
ಬಪ್ಪೆನು ಸತಿಸುತರನು ನೋಡಿ
ಒಪ್ಪದಿಂದೆನ್ನಯ ತಪ್ಪುಗಳೆಲ್ಲ ಎ
ಮ್ಮಪ್ಪ ಖಾದ್ರೀಶನೆ ಕ್ಷಮೆಮಾಡಿ ೫

ಝಂಪೆ —

ಶ್ರೀ ರಮಾಪತಿ ತಿರುಕಹಾರವನು ಇವನೆಂದು
ಗಾರುಮಾಡದೆನೋಡಿ ಕಾರುಣ್ಯದೆನ್ನ ೧
ಪೇಳಬಾರದನಿಖಿಳ ಊಳಿಗವ ನೀರಚಿಸಿ
ಪಾಲಿಸಿದೆ ಎನ್ನ ನವನೀಲಘನವರ್ಣ ೨
ಎಣಿಸುವಡೆವಶವಲ್ಲ ಮನವೆಬಲ್ಲುದು ಎನ್ನ
ಮನವೊಲಿದು ಸಲಹಿದುದ ಸನಕಾದಿವಂದ್ಯ ೩

ವಚನ —

ಇಂತು ಅನೇಕ ಪ್ರಕಾರದಿಂ ಸ್ತೋತ್ರವಂ ಮಾಡುತ್ತ ನಿರೂಪವಂ ಬೇಡುವ ಕುಚೇಲನೊಡನೆ ಶ್ರೀಮದ್ರಮಾವಲ್ಲಭನೇನೆನ್ನುತಿರ್ದನು —

ತ್ರಿಪದಿ —

ಎಂದು ಬಾರದಸಖನು ನೀನಡೆ
ತಂದೆಯಪರೂಪದಲಿ ಎಮ್ಮಯ
ಮಂದಿರದಿ ಇರಬಾರದೇ ನಾಲ್ಕೊಂದುದಿನವು ೧

ನಾನು ನಿನ್ನವ ಮನೆಯು ನಿನ್ನದು
ಮಾನಿನೀಜನ ಮಕ್ಕಳಾದ್ಯರು
ಭೂನುತನೆ ನಿನ್ನವರು ಭೇದವೆ ಮಾನಸದೊಳು ೨

ನೀನಿರ್ದೈ ನಾಲ್ಕಾರುದಿವಸವು
ನಾನು ಬರುವೆನು ಕೂಡೆ ಪೋಗುವ
ಸಾನುರಾಗದಿ ನಿಲ್ಲಲಾಗದೆ ಮಾನನಿಧಿಯೆ ೩

ನೆನೆದೆಯೇನ್ನೈ ಮನದಿ ನಿನ್ನಯ
ವನಿತೆಯನ್ನಗಲಿರುವೆನೆನುತಲಿ
ಎನಗೆ ಪೇಳ್ ಕರೆಸುವೆನು ಬೇಗದಿ ವನಜಮುಖಿಯು ೪

ಎಂದು ಪೇಳುವ ಮದನನೈಯಗೆ
ವಂದಿಸುತ ಸಾಷ್ಟಾಂಗದಿಂದಲಿ
ನಿಂದು ಬಿನ್ನಹವಾಡಿದನು ಮುದದಿಂದಲಾಗ ೫

ಸೀಸಪದ್ಯ.—

ಕಮಲಾಕ್ಷ ಗೋವಿಂದ ಕಮಲಾಮನೋಹರಾ
ಅಖಿಳಲೋಕನಿವಾಸ ಅಬ್ಜನಾಭಾ
ಎಲ್ಲಿಗೇ ನಾಂಪೋಪೆ ಎಲ್ಲಿ ಎನ್ನಯವಾಸ
ಎತ್ತಣಾಸುದತಿ ನಾನೆತ್ತಲಿರುವೆ
ಈ ದೇಹವೆಲ್ಲಿದೊರ್ಡೇನು ನಿನ್ನಯಪಾದ
ಪದ್ಮಕೆನ್ನಯ ಚಿತ್ತಭ್ರಮರವಾಗಿ
ಇರುತಿರಲ್ಕಾನಂದಭರಿತನಾಗಿರುವೆ ನೀ
ನುರುತರಕಾರುಣ್ಯ ಮೂರ್ತಿಯೈಸೆ
ಹೋಗಿಬರುತಿದೆ ಈ ದೇಹವೀಗನುಜ್ಞೆಯನು
ಇತ್ತು ಕಳುಹೆಂದು ಸಾಷ್ಟಾಂಗವೆರಗೆ
ಬೇಗತೆಗೆದು ತಕ್ಕೈಸಿ ಶ್ರೀಕೃಷ್ಣ ನಗುತಾ
ಸಖನೊಡನೆ ಪೇಳ್ದನಿಂತೆಂದು ಸಂತಸದೊಳು

ಮೂಲಪದ:—

ಪ್ರಾಣಬಾಂಧವ ನೀನ್ಹೋಗಿ ಬಾರೈಯು ಸಂತೋಷದಿಂದ
ಮಾಣದಿರು ಈಗಮೇಲಣ, ಪ್ರೀತಿಯನಿನ್ನು
ಮಾನಸದಿ ಸಂತಸದೊಳು ೧

ಇಷ್ಟುದಿನವು ಬಾರದಂತೆ ಇನ್ನುಮಾಡದೆ ನೀ ಬಂದು
ತುಷ್ಟಿಬಡಿಸು ದರುಶನವಿತ್ತು, ಪೋಗುತ್ತಲಿರು
ಇಷ್ಟಬಾಂಧವ ನೀನೆನಗೆ ೨

ಉತ್ತಮೋತ್ತಮಳಾದ ಸಮ್ಮತ್ತಿಗೆ ಶ್ರೀಚರಣಕ್ಕೆ
ಹತ್ತು ಹತ್ತಾಗಿ ಸಾಷ್ಟಾಂಗವ, ಮಾಡಿದೆನೆಂದು
ಮತ್ತೆಪೇಳು ಮರೆಯದೆ ನೀನು ೩

ನಿನ್ನಯ ನಂದನರಿಗೆ ಎನ್ನಾಶೀರ್ವಾದವ ಪೇಳು
ಸನ್ನುತಾಂಗ ಮಿಕ್ಕಾದವರನ್ನು, ಕೇಳಿದೆನೆಂದು
ನನ್ನಿಯಿಂದ ಪೇಳು ಮರೆಯದೆ ೪

ಎಂದನುಜ್ಞೆಯನಿತ್ತು ಗೋವಿಂದನ ಪದಾಂಬುಜಕ್ಕೆ
ವಂದನೆಯುಗೈದು ರುಕುಮಿಣಿ, ಸತ್ಯಭಾಮಾದಿ
ಇಂದುವದನೆಯರ ಕಂಡನು ೫

ವಚನ—

ಇಂತು ಶ್ರೀ ಕೃಷ್ಣನಿಂದ ನಿರೂಪವಂ ತೆಗೆದುಕೊಂಡು ಶ್ರೀ ರುಕ್ಮಿಣೀ ಸತ್ಯಭಾಮಾದಿ ಅಷ್ಟಮಹಿಷಿಯರಂ ಕಾಣಿಸಿಕೊಂಡು ಕುಚೇಲನೇನೆನ್ನು ತಿರ್ದನು —

ರಾಗ ಪಂತುವರಾಳಿ ಅಟತಾಳ

ಪೋಗಿ ಬರುತ್ತೇನೆ ಅಮ್ಮಯ್ಯ ನಾಂ
ಪೋಗಿ ಬರುತ್ತೇನೆ ಪ.

ಪೋಗಿ ಬರುತ್ತೇನೆ ತಾಯೇ ಅಮ್ಮಯ್ಯ
ಈಗ ನಿಮ್ಮಯ ದಯವಿರಲೆನ್ನಲ್ಲಿ ಅ.

ಬಹಳ ಸಂತಸವಾಯ್ತು ಬಂದದಿನಾರಭ್ಯ
ಸಹಪಙ್ತಿ ಭೋಜನ ಷಡುರಸದಿ
ಇಹಪರದಲಿ ನಾನು ಇನ್ನೆಂತು ಮರೆವೆನು
ಅಹಿರಾಜವೇಣಿ ಶ್ರೀ ಹರಿಯ ಪಟ್ಟದರಾಣಿ ೧

ನಿಮ್ಮ ಮಕ್ಕಳಮಗ ನಿಮ್ಮ ದಾಸರದಾಸ
ನಿಮ್ಮ ಭಂಟರಭಂಟ ನಿಮಮ್ಮಳಿಗ
ಜನ್ಮಜನ್ಮದಿ ನಿಮ್ಮ ಚರಣಕಮಲಗಳ
ನೆಮ್ಮವಭಕ್ತಿಯನಿತ್ತು ಸಲಹಬೇಕು ೨

ಅಷ್ಟಮಹಾಲಕ್ಷ್ಮಿಯವತಾರರಾಗಿಹ
ಅಷ್ಟಮಹಿಷೇರಿರಾ ಆನಂದದಿ
ಅಷ್ಟಾಂಗಸಖ ನಾರಸಿಂಗನಡಿಗಳಲ್ಲಿ
ನಿಷ್ಠೆಯಿರುವಂತನುಜ್ಞೆಯನಿತ್ತರಾದಡೆ ೩

ವಚನ:—

ಈ ಪ್ರಕಾರದಿಂ ಅಷ್ಟಮಹಿಷಿಯರುಗಳಿಗೆ ವಂದನೆಯಂ ಮಾಡಿ ಇವರುಗಳಿಂದ ಉಪಚರಿತನಾಗಿ ವಸುದೇವ ದೇವಕೀ ಮುಖ್ಯರನುಜ್ಞೆಯಂತಾಳಿ ಪುನಹಾ ಶ್ರೀ ಕೃಷ್ಣನ ಸನ್ನಿಧಾನಕ್ಕೆ ಬಂದು ಕರಕಮಲಂಗಳಂ ಮುಗಿದು ಪ್ಪಣೆಯಂ ಕೇಳಲು ಶ್ರೀ ಕೃಷ್ಣರಾಯನು ಕಾರುಣ್ಯದಿಂದ ಸಂಗಡ ಕೆಲವು ದೂರಬಂದು ಕಳುಹಿಸಿಕೊಟ್ಟು ನಿಜಾಂತಃಪುರಕ್ಕೆ ಚಿತ್ತೈಸುವ ಶ್ರೀ ಕೃಷ್ಣಮೂರ್ತಿಯಂ ಅಗಲಿರಲಾರದೆ ಅತ್ಯಂತ ಚಿಂತಾಕ್ರಾಂತನಾಗಿ ತಾಯನ್ನಗಲಿ ಪೋಗುವ ಶಿಶುವಿನಂತೆ ಶ್ರೀ ಕೃಷ್ಣಮೂರ್ತಿಯ ಧ್ಯಾನವನ್ನು ಹೃತ್ಕಮಲದೊಳಗಿಂಬಿಟ್ಟುಕೊಂಡು ದ್ವಾರಕಾಪಟ್ಟಣದ ರಾಜಮಾರ್ಗದೊಳ್ ಬರುತ್ತಿರುವ ಕುಚೇಲನಂ ಕಂಡು ಪೌರಜನವೇನೆಂದು ಕೊಂಡಾಡುತಿರ್ದರು.—

ರಾಗ ತೋಡಿ ಅಟತಾಳ

ಏನು ಪುಣ್ಯವನು ಮಾಡಿದನೊ ಕುಚೇಲ
ಶ್ರೀನಿವಾಸನಾದ ಶ್ರೀ ಕೃಷ್ಣನ ಚರಣಾಬ್ಜಸಖನಂತೆ ಪ

ಸರಸಿಜಭವಾದ್ಯರ ಸರಕುಮಾಡದ ದೇವ
ಪಿರಿದು ದ್ವಾರಪಾಲಕ ಬಿನ್ನೈಸೆ ಕೇಳಿ
ಕರೆಸಿತಾನೆದುರಾಗಿ ಗಮನಿಸಿಯಾಲಿಂಗನ
ವೆರೆಸಿ ರತುನವಿಷ್ಟರದಿ ಕುಳ್ಳಿರಿಸಿದನಂತೆ ೧

ಸುರನದಿ ಪಿತನೀ ಭೂಸುರನ ಚರಣಯುಗ
ಸರಸಿಜವತೊಳೆದ ಜಲ ತನ್ನ ಶಿರವಾಂತು
ಸುರರಿಂದ ಪೂಜೆಯುಗೊಂಬಂತೆ ಪೂಜಿಸಿ
ಹರಿಯು ಸತ್ಸಂಗದಿತಿಹಾಸವ ಪೇಳಿದನಂತೆ ೨

ತರಳತನದಲಿ ಸದ್ಗುರುಗಳ ಭವನದಿ
ಪರಿಚರಿಯ ಮಾಡಿದ ಪರಿಯನೆಲ್ಲ
ಅರುಹಿ ತನ್ನ ಕಕ್ಷಾಂತರದ ಜೀರ್ಣಾಂಬರದ
ಸೆರಗಿಲಿರ್ದವಲಕ್ಕಿಯ ಸವಿದು ಚಪ್ಪರಿಸಿದನಂತೆ ೩

ಒಡನೆ ತನ್ನರಮನೆಗೊಯಿದು ಮಜ್ಜನಗೈಸಿ
ಮಡಿವಸನಗಳಿತ್ತು ಮಮತೆಯಿಂದಲಿ
ಮಡದಿ ರುಕ್ಮಿಣಿಗೈದ ಷಡುರಸಾನ್ನವನುಣ್ಣ
ಬಡಿಸಿ ಸಹಪಙ್ತಿಲಾಭವ ಪಾಲಿಸಿದನಂತೆ ೪

ಇರುಳನ್ನಪಾನಗಳ ಇತ್ತು ನಿಂದು ತನ್ನಯ
ಪುರಕೆ ಪೋಗಬೇಕೆನುತರುಹಿಸಲು
ಹರುಷದಿ ಕೆಲದೂರವೆರೆಸಿ ಕಳುಹಲು ಖಾದ್ರಿ
ನರಹರಿಯಧ್ಯಾನದಿ ಪುರಕೆ ಪೋಗುವನಂತೆ ೫

ವಚನ—

ಈ ಪ್ರಕಾರದಿಂದ ಪುರಜನರು ಕೊಂಡಾಡುತ್ತಿರಲು ಕುಚೇಲನು ದ್ವಾರಕಾಪುರವಂ ಪೊರಮಟ್ಟು ನಿಜಪುರದ ಮಾರ್ಗವಂ ಪಿಡಿದು ಬರುತ್ತಾ ತನ್ನ ಮನದೊಳೇನೆನ್ನುತಿರ್ದನು —

ಜಾವಪದ:—

ದ್ವಾರಕಿಯ ಬಿಟ್ಟು ನಾನಮ್ಮೂರಿಗೆ ಪೋಗಲು ಬಂದ
ದಾರಿಮರೆವು ತೋರಿದಂತಿದೆ, ಅಲ್ಲದಿರ್ದಡೆ
ಕಾರಣ ಅದಾರಮನೆಯಿದು ೧

ಆರಭವನಕೆ ಬಂದೆ ಊರನೋಡಲೆನ್ನ ಅಗ್ರ
ಹಾರದಂತೆ ಕಾಣಿಸುತ್ತಿದೆ, ನಮ್ಮನೆ ಇಹ
ಕೇರಿಯಂತೆ ಕುರುಹುಗಳಿವೆ ೨

ಒಂದು ಕೇರಿಯಂತೆ ಮತ್ತೊಂದು ಕೇರಿಗಳಿರವೆ
ಮಂದಮತಿ ದೃಷ್ಟಿಗಾಯಿತೋ, ಹಾಗಲ್ಲದೊಡೀ
ಮಂದಿರವೆಲ್ಲಿಂದ ಬಂದಿದೆ? ೩

ಚಂಪಕಮಾಲಾ ವೃತ್ತ:—

ನೆರೆಹೊರೆ ಬೀದಿ ಭಾವಿ ನದಿ ನಿರ್ಮಲ ಬ್ರಾಹ್ಮಣರಿರ್ಪ ಶ್ರೇಣಿಗಳ್
ತರುಲತೆ ಗುಲ್ಮ ಪುಷ್ಪ ವನ ಧಾರ್ಮಿಕರಿಟ್ಟಹ ಸತ್ರಸಾಲೆಗಳ್
ಕುರುಹುಗಳಂ ನಿರೀಕ್ಷಿಸಲು ಕುಂದುಗಳಿಲ್ಲಮದೀಯ ವಾಸವೀ
ಪ್ರವಹದಾದೊಡೀಭವನ ಭೂಷಣ ನೂತನ ಚಿತ್ರವೈಸಲೇ

ವಚನ —

ಎಂತೆಂದಾಶ್ಚರ್ಯ ಚಿತ್ತನಾಗಿ ತನ್ನ ಪೂರ್ವದ ಪರ್ಣಶಾಲೆಯಂ ಕಾಣದೆ ಅಗ್ರಹಾರವೆಲ್ಲಮಂ ತಿರುಗಿ ಅರಸಿ ಪುನಹಾ ನಿರ್ವಿಣ್ಣನಾಗಿ ಬಂದು ಮಂದಿರದ ಸಮೀಪದಿ ನಿಂದಿರುವ ಸಮಯದೊಳೆಂತೆನೆ.—

ಕಂದ:—

ಅಂಬರದಿ ಪೋಪಚಂದ್ರಗೆ
ಚುಂಬನವಂ ಕೊಡುತಲಿರುವ ಸೌಧಾಗ್ರದೊಳಾ
ಬಿಂಬೋಷ್ಠಿ ಕುಂಭ ಕುಚೆ ಶಶಿ
ಬಿಂಬಾಸ್ಯೆಯು ಬೇಗ ತನ್ನ ಪತಿಯಂ ಕಂಡಳ್

ವಚನ —

ಇಂತು ಪತಿಯಾದ ಸುಧಾಮನಂ ಕಂಡು ಸುಶೀಲೆಯು ಈತನ ಸನ್ನಿಧಾನಕ್ಕೆ ಬರುತಿರ್ದಳದೆಂತೆನೆ.—

ರಾಗ ಸಾವೇರಿ ಆದಿತಾಳ

ಬಂದಳಾಗ! ಸುಶೀಲೆ ಪರಮಮಂಗಳ ಜಾಲೆ
ಇಂದು ಬಿಂಬ ನಿಭಾನನೆ
ಮಂದಾಸ್ಮಿತದಿಭರಾಜ ಸಮಯಾನೆ
ಮನ್ಮಥ ಸಾನೆ ಪ

ಮಂದಹಾಸದೊಳ್ಳೆ ತಂದಳಂದು ಅರ
ವಿಂದನಯನದ ಮಂದಗಮನದ
ಸುಂದರೀಜನವೃಂದ ಶತದಿಂದ, ನಂದದಿಂದ ಅ.

ಕಿರುಗೆಜ್ಜೆ ಕಡಗಕಾಲ್ ಸರವು ಪಾಗಡವುಮೇಲ್
ಕಿರುಪಿಲ್ಲಿಗಳು ಮೆಂಟಿಕೆ—ಗಿರುಕು ಕಾಲುಂ
ಗುರವು ನೀರಮುದ್ರಿಕೆ—ಯಿಂದರುಣನ
ಕಿರಣ ಪೋಲುವಪದಕೆ—ಕಿಂಕಿಣಿಯುತ
ಮೆರೆವ ಕಾಂಚಿಯು ಮಿರುಪರತುನದ
ಸರಪದಕಗಳು ಸರಿಗೆಯಡ್ಡಿಕೆ
ಧರಧರದ ಕಟ್ಬಾಣಿಗಳೆಸೆಯೆ
ಭೂಸುರನ ಸಿರಿಯೆ ೧

ಕೊರಳ ಮಂಗಳಸೂತ್ರ ಕರಿಮಣಿ ಮುಖಚಿತ್ರಾ
ಭರಣ ಕಂಠದೊಳೆಸೆಯೆ—ವಂಕಿಯು ಭಾ
ಪುರಿ ಕಂಕಣಗಳುಲಿಯೆ—ಬಾಜುಬಂದಿ
ನೆರವಿನಮಣಿ ಸಿರಿಯೆ—ಕರ್ಣದಿ ಚಂದ್ರ
ಮುರುವು ಬಾವುಲಿ ಬುಗುಡಿ ಮುತ್ತಿನ
ಸರಪಣಿಯು ಪಂಜರದ ಓಲೆಯು
ನೆರೆಹೊನ್ನ್ಹೂವು ಕೊಪ್ಪುವೆಂಟಿಯಾದಿ
ಶೋಭಿಸುತ ಭರದಿ ೨

ರತುನದ ಮೂಗುತಿ ಪ್ರತಿಯಿಲ್ಲದ ದ್ಯುತಿ
ಯುತ ಸೂರ್ಯಚಂದ್ರ ಮುರುವು-ರ್‍ಯಾಕಟೆಚೌರಿ
ಶತಜಡೆ ಭಂಗಾರವು—ಭ್ರಮರತತಿ
ಯುತವಾದ ಪುಷ್ಪಸರವು—ಎಂದೆಂದಿಗೂ
ಚ್ಯುತಿರಹಿತದರಿಸಿನವು ಕುಂಕುಮ
ಧೃತ ಹಿರಣ್ಯದುಕೂಲಕಂಚುಕ
ವತಿ ನೃಸಿಂಹಪದಾಬ್ಜಷಟ್ಚರಣೆ
ಸರ್ವಾಭರಣೆ ೩

ಕಂದಃ—

ಮುನ್ನ ತನಗುಳ್ಳ ಬಡತನ
ವನ್ನು ಕಟಿಯೊಳಿಟ್ಟು ರತುನದೊಡ್ಯಾಣದಿ ಕೋ
ಪೋನ್ನತದಿಬಿಗಿದ ಬೆಡಗಿನ
ಬಿನ್ನಾಣದ ಜಾಣೆ ಪತಿಯ ಬೇಗದಿ ಕಂಡಳ್

ಸೀಸಪದ್ಯ: —

ಕೋಟಿರತ್ನನಿಬದ್ಧ ಕೋಟೀರ ಕಾಂತಿಯಿಂ
ಮಕರಕುಂಡಲದೀಪ್ತಿ ಮಹಿತದಿಂದ
ಬಹುದಿವ್ಯಗಳಹಾರಪದಕರಾಜಿಗಳಿಂದ
ವಿನುತಸತ್ಕನಕೋಪೇತದಿಂದ
ರಮಣೀಯ ಭುಜಕೀರ್ತಿ ರಾಮನಾಮಾಂಗುಳೀ
ವರ ಪವಿತ್ರಾದಿ ಉಂಗುರಗಳಿಂದ
ಕಮನೀಯ ಕಟಿಸೂತ್ರ ಕಲಿತಪಾದುಕದಿಂದ
ಕಮನೀಯವಸನೋತ್ತರೀಯದಿಂದ
ನವಮುದ ಶೋಭಿತಾಕಾರವಾಗಿ
ವರಸುಧಾಮಾಖ್ಯ ಜೀವಿತೇಶ್ವರನ
ವಿನಯಭಕ್ತಿಯಿಂದಲಿ ಬಲವಂದುಪದಕೆರಗಿ
ನಮಿಸಿ ಸಾಷ್ಟಾಂಗವೆರಗಿದಳ್ ನಳನನೇತ್ರಿ

ಝಂಪೆ:—

ಹೊನ್ನ ಕಲಶದಿ ತಂದ ಪನ್ನೀರಿನಿಂದ ನಿಜ
ಚೆನ್ನಿಗನ ಚರಣಗಳ ಚೆನ್ನಾಗಿ ತೊಳೆದು ೧
ಚರಣೋದಕವ ತನ್ನ ಶಿರದಿ ಮುದದೊಳಗಾಂತು
ಸೆರಗಿನಿಂದೊರೆಸಿದಳು ಚರಣ ಸಲಿಲವನು ೨
ಗಂಧಪುಷ್ಪಾಕ್ಷತೆಗಳಿಂದ ಪೂಜಿಸಿ ಭಕ್ತಿ
ಯಿಂದಲಾದರಿಸಿದಳು ಮಂದಸ್ಮಿತದಲಿ ೩

ರಾಜಿತದ ರತುನ ನೀರಾಜನಂಗಳ ಬೆಳಗಿ
ಸೋಜಿಗದೆ ಚೆಲ್ಲಿದಳು ರಾಜೀವಗಂಧಿ ೪
ಪತಿತಪಾವನರಮಾಪತಿಯೆ ನಿಜಪತಿಯೆಂದು
ಪತಿವ್ರತೆಯು ತಿಳಿದಳಪ್ರತಿಮತಿಯೊಳಾಗ ೫

ರಾಗ ಶಂಕರಾಭರಣ ಅಟತಾಳ

ಕಲಿತಧವಳಚ್ಛತ್ರಚಾಮರಗಳನು ಪಿಡಿದುಸೂತರು
ನಿಲಲುಮಾಗಧರೊಲಿದು ಪೊಗಳಲು ನಿರುಪಮದೊಳು ೧
ಬಹುಪರಾಕು ಮಹಾತ್ಮ ಶ್ರೀಹರಿಭಕುತಯೆನುತಾವೇತ್ರದ
ವಿಹಿತಹಸ್ತರು ಪೇಳುತಿರುವರು ವಿಹಿತದಿಂದ ೨
ಕಳಸಕನ್ನಡಿವಾದ್ಯರವ ಮಂಗಳದೊಳೆಸೆಯೆಗಣಿಕೆಯ
ರಲಸಿನಟಿಸಲು ಗಾಯಕರು ಉಜ್ವಲಿಸುತಿರಲು ೩

ವಚನ—

ಈ ಪ್ರಕಾರವಾದ ಸಂಭ್ರಮದಿಂದ ಅಂದಣವನ್ನೇರಿ ಇಂದಿರಾಮಂದಿರದಂತಿರ್ಪ ನಿಜಮಂದಿರವಂ ಪ್ರವೇಶಗೈದು ನೋಡುತಿರ್ದನದೆಂತೆನೆ.—

ತ್ರಿಪದಿ —

ರಾಮಣೀಯಕ ವಜ್ರಕೀಲಿತ
ಭೂಮಿಮೃಗ ಮದಸಾರಣೆಯು ಮದ
ಸಾಮಜದ ಕುಂಭಸ್ಥಳದ,ಮುಕ್ತಾಮಣಿಗಳಂತೆ ೧

ರಂಗವಲ್ಲಿಯು ಸುಪ್ರವಾಳದ
ಸಿಂಗರಿಸಿರುವ ಕಾರಣೆಯು ಚಂ
ದ್ರಂಗೆ ಹಿತವಹಶಿಲೆಯು ಹೊಸ್ತಿಲ ಹೊಂಗೆಲಸದ ೨

ಮರಕತದ ಮಣಿದ್ವಾರಬಂಧದ
ನಿರುಪಮದ ರತ್ನದ ಕವಾಟಗ
ಳರುಣರುಚಿ ಮಾಣಿಕ್ಯತೋರಣ ಸಿರಿಯಲೆಸೆಯೆ ೩

ಕುಂದಣದ ಭಿತ್ತಿಗಳು ವಜ್ರದ
ಸಂಮುಗಾರೆಯು ನೀಲಮಣಿ ತೊಲೆ
ಛಂದ ಗೋಮೇಧಿಕದ ಮುಚ್ಚುಳನಂದದಿಂದ ೨

ಸಾಲಲೆಸೆದಿಹ ಪುಷ್ಯರಾಗದ
ಮೇಲುಕಟ್ಟಿನ ಲೋವೆಬೋದಿಗೆ
ಜಾಲವೈಡೂರ್ಯಗಳ ರಚನೆ ವರಾಲಯದೊಳು ೩

ಉರಗರಾಜನ ಶಿರದೊಳಿರುತಿಹ
ವರರತುನಕಿಂದಧಿಕ ತೇಜ
ಸ್ಫುರಿತ ದಿನಮಣಿದೀಪಪಙ್ಕ್ತಿಯ ಕಿರಣಸಂಪದ ೪

ಮೋದದಿಂದಿನರಾತ್ರಿಯೆಂಬುವ
ಭೇದಗಳು ತೋರದೆ ವಿಚಿತ್ರವಿ
ನೋದಮಂದಿರಕಂಡು ಕೌತುಕವಾಪುದಿಸಲು ೫

ಸೂರ್ಯಕಾಂತದ ಚಂದ್ರಕಾಂತದ
ಚಾರುಶಿಲೆಗಳು ದ್ರವಿಸುವದರಿಂ
ತೋರುವುದಹೋರಾತ್ರಿ ಕಾಲಗಮಾವನೆಯಲಿ ೬

ಸುರಪತಿಯು ಧನಪತಿಯು ಸಿರಿಪತಿ
ಯರಮನೆಗಳ ವಿಲಾಸಕಿಂದತಿ
ಹಿರಿದುಹೊಗಳಲು ವಿಶ್ವಕರ್ಮನ ಪರುಠವಣೆಯು ೭

ವಚನ —

ಇಂತಿರುವ ಅಂತಃಪುರದ ಮಧ್ಯದಲ್ಲಿ ಕೋಟಿಸೂರ್ಯಪ್ರಕಾಶದಂತೆ ಹೊಳೆವ ಹಜಾರದಲ್ಲಿ ರತ್ನಾಸನಾಸೀನನಾಗಿ ಒಡ್ಡೋಲಗದಲ್ಲಿ ಕುಳಿತಿರುವ ಸಮಯದೊಳಿಂತೆನೆ —

ಯಾಲಪದ:—

ಬಾಲದೊಡಿಗೆಗಳಿಂದ ಬಾಲರಸಿಂಗರಿಸಿ ಸು
ಶೀಲೆಕರೆದುತಂದುಕಾಂತನ, ಪಾದಾಬ್ಜದೊಳು
ವಾಳಿಗಳಿಂದೊಂದನೆಗಳು ೧

ವಿರಚಿಸಿದ ಬಾಲಕರಕರೆಸಿ ತನ್ನ ತೊಡೆಯೊಳು ಕು
ಳ್ಳಿರಿಸಿದನು ಮೋಹದಿಂದಲಿ, ಕೃಷ್ಣರಾಯನ
ಕರುಣವನು ಸ್ಮರಣೆಗೈವುತ ೨

ಇಂತಾದ ಸಂಸಾರದಿಂದ ಚಿಂತಿಸುತಚಿನ್ಮಯನ
ನಂತಗುಣಗಳನ್ನು ಮನದಲ್ಲಿ, ಸ್ಮರಿಸುತ್ತಿರೆ
ಸಂತಸದವಾರ್ತೆಯ ಕೇಳಿ ೩

ಅಗ್ರಹಾರದಲ್ಲಿಹ ಸಮಗ್ರರಾದ ಭೂಸುರರು
ದಗ್ರವಾದ ಸಂಭ್ರಮದೊಳು, ಸದ್ಗುಣಗಣ
ನಗ್ರಗಣ್ಯನರಮನೆಗಾಗಿ ೪

ದಂಪತಿಯುಕ್ತಗಳಾಗಿ ಗುಂಪುಗೂಡಿ ಬ್ರಾಹ್ಮಣರು
ಇಂಪಿನಿಂದ ಬಂದವರನ್ನು, ಕಾಣಿಸಿಕೊಂಡು
ಸೊಂಪಿನಿಂದಾಸನವನಿತ್ತು ೫

ಝುಂಪೆ —

ಧಾರುಣೀನಿರ್ಜರರ ತಾರತಮ್ಯವನರಿತು
ಭೂರಿದಕ್ಷಿಣೆಯ ತಾಂಬೂಲಗಳಕೊಟ್ಟು ೧

ವರಸುವಾಸಿನಿಯರಿಗೆ ಅರಿಸಿನವು ಕುಂಕುಮವು
ಮರದಬಾಗಿನಗಳನು ಹರುಷದಿಂಕೊಡಿಸಿ ೨

ಗಂಧಪುಷ್ಪಾಕ್ಷತೆಗಳಿಂದ ಪೂಜಿಸುತ ನಿಜ
ಮಂದಿರಕೆ ಕಳುಹಿದನು ಸಂದಸಂಭ್ರಮದಿ ೩

ವಚನ.—

ಇಂತು ಬಂದ ಪುರಜನಂಗಳನ್ನು ಸಂತೈಸಿ ಅವರ ನಿಜಮಂದಿರಂ

ಗಳಿಗೆ ಕಳುಹಿಸಿ ಸಮಸ್ತವಾದ ಗೃಹಪರಿವಾರದ ಜನಂಗಳಿಗೆ ತಾಂಬೂಲ ವಸ್ತ್ರಾಭರಣಂಗಳಿತ್ತು ಕಳುಹಿಸಿದ ತದನಂತರದೊಳೆಂತೆನೆ —

ದ್ವಿಪದಿ —

ಶ್ರೀರಮಾಪ್ರಾಣೇಶ ಶೇಷಾಹಿಶಯನ
ವಾರಿಜೋದ್ಭವವಂದ್ಯ ವಸುದೇವತನಯ ೧

ನಾದಶ್ರೀಕೃಷ್ಣ ಪೂರ್ಣಾನಂದಮಯನ
ಪಾದದರುಶನದಿಂದ ಬಂದ ಸಂಪದವ ೨

ಸಕಲವೃತ್ತಾಂತಮಂ ಸಂತೋಷದಿಂದ
ಪ್ರಕಟಮಾದಾನಂದ ಬಾಷ್ಪಧಾರೆಗಳು ೩

ಸುರಿಯೆತನ್ನಯ ನಿಜೇಶ್ವರಿಯಾದ ಕಾಂತೆ
ಗೊರೆದು ಕುಚೇಲನಾಹರಿಯಾಜ್ಞೆಯಂತೆ ೪

ನಿನಗೆನಮಸ್ಕಾರ ನಿನ್ನ ಪುತ್ರರ್ಗೆ
ಘನತರಾಶೀರ್ವಾದಗಳನು ಪೇಳೆಂದು ೫

ಸಕಲ ಜಗನ್ನಿಯಾಮಕನು ಪೇಳಿದನು
ವಿಕಚಪದ್ಮಾಕ್ಷಿ ಶ್ರೀಕೃಷ್ಣದರುಶನವು ೬

ನಿನ್ನಿಂದಲೆನಗಾಯ್ತು ನೀಪುಣ್ಯಸಾಧ್ವಿ
ಪನ್ನಂಗವೇಣಿ ಶ್ರೀಪತಿಯು ನಿನಗಾಗಿ ೭

ಕರುಣಿಸಿದನೀಭಾಗ್ಯ ತರುಣಿನಿನಗಾಗಿ
ಚರಣದರುಶನವಿತ್ತ ಸಾಕದೇತನಗೆ ೮

ಎಂದು ಶ್ರೀಹರಿಯ ಮಹಾಮಹಿಮೆಗಳನು
ಕುಂದದೆ ಕಾಪಾಡಿ ಕುಣಿಕುಣಿದಾಡಿ ೯

ಎನಗೆ ಪೇಳಿದ ನಿನಿತು ಘನತರೈಶ್ವರ್ಯ
ವನುಪಾಲಿಸಿದ ದಯಾವನಧಿ ಶ್ರೀಕೃಷ್ಣ ೧೦

ರಮಣಿಯುಳ ಮನದಭಿಲಾಷೆಯುಂ ತಿಳಿದು
ವಿಮಲದರುಶನವನಿತ್ತು ತನ್ನಂತೆಗೈದ ೧೧

ನೆಂದುಮನದೊಳಗೆ ಪೂರ್ಣಾನಂದನಾಗಿ
ಕಂದರ್ಪಜನಕನಾಕಾರವಂ ಮನದಿ ೧೨

ಧ್ಯಾನಿಸುತಲಡಿಗಡಿಗೆ ಸದ್ಗುಣಾಳಿಗಳ
ಮಾನಸದಿಪೂಜಿಸುತ ಮೌನದಿಂದಿರುವ ೧೩

ಪತಿಯುಪದಗಳಿಗೆರಗಿ ಪರಮಭಕ್ತಿಯಲಿ
ಸತಿಯೆಂದಳಿಂತು ಸಂತೋಷದಿಂದ ೧೪

ವಚನ —

ಈ ಪ್ರಕಾರದಿಂದ ಪರಮಾತ್ಮನ ಮಹಾಮಹಿಮೆಗಳನ್ನು ಸ್ಮರಿಸುತ್ತ ಮೌನದಿಂದಿರುವ ಕುಚೇಲನೊಳು ಸತಿಯಾದ ಸುಶೀಲಾದೇವಿಯಿನ್ನೇನೆನ್ನು

ತ್ತಿರ್ದಳು —

ಷಟ್ಪದಿ:—

ಏನಿದೇನಾಶ್ಚರ್ಯ ಇಂದಿರೇಶನ ಮಹಾ
ಮಹಿಮೆಗೀಸಾಮ್ರಾಜ್ಯವಹುದೆ ನಾಥ
ಆ ದೇವಿನಾರೀಮಣಿ ಮಹಲಕ್ಷ್ಮಿಕಟಾಕ್ಷ
ವೀಕ್ಷಣದಿಂದಲಾ ವಿಧಿಭವೇಂದ್ರ
ಪದವಿಯೈದುವುದಮಮ ಪ್ರಾಣೇಶ ಆ ದೇವಿ
ಸ್ವಕರಾಬ್ಜದಿಂದ ವಿರಿಂಚಾಮರಾದಿ
ಉಪಚಾರಗೈದರಿಂದುಪಮಾನರಹಿತವಾ
ದೀಭಾಗ್ಯಬರುವುದಿನ್ನೇನುಚಿತ್ರ
ಮೂರುಲೋಕಂಗಳಾಳ್ವ ಶ್ರೀನಾರಾಯಣನ
ಕಾರುಣ್ಯಕೀಭಾಗ್ಯ ಸಮವಲ್ಲ ಅರಿತರ್ಗೆ
ಎಲ್ಲಧರೆಯಾಳ್ವ ನೃಪತಿಯೆಂದೆಳ್ಳಿನಷ್ಟು
ಧನವನಿತ್ತರೆ ಹಿರಿದಾಯ್ತು ಧರ್ಮಚರಿತಾ

ಕಂದ:—

ಇಂತೆಂದು ಕಾಂತೆ ಪತಿಯೊಳು
ಸಂತೋಷದಿಹರಿಯ ಮಹಿಮೆಸರಸದಿಪೇಳ್ದ

ತ್ಯಂತ ಹರುಷದಲಿ ಒಳಮನೆ
ಯಂತಃಪುರವೈದಿಸಾಧ ಗರುಹುತಲಿರ್ದಳ್

ವಚನ —

ಇಂತು ಅಂತಃಪುರವಂ ಸಾರ್ದು ಸುಧಾಮಂಗೆ ಸುಶೀಲೆ ಸಾಕಾರವಾದ ಸಕಲಸಾಮ್ರಾಜ್ಯಮಂ ತೋರುತಿರ್ದಳದೆಂತೆನೆ:—

ರಾಗ ಸೌರಾಷ್ಟ್ರ ತಾಳ

ನೋಡೆನ್ನ ಪ್ರಾಣದೊಲ್ಲಭ ಶ್ರೀಕೃಷ್ಣರಾಯ
ಮಾಡಿಪಾಲಿಸಿದ ಸಾಮ್ರಾಜ್ಯರೂಪಾಂಬುಧಿಯ ಪ

ರಮಣವಾಜಿಶಾಲೆಯೊಳು ಆ ಮಹಾಉಚ್ಚೈಃಶ್ರವಸಕೆ
ಸಮನಾದನೇಕವಾಜಿಗಳು ಸಾಮಜಾಲಯದೊಳಿಹ
ಪೀಮಹಾದ್ಯೈರಾವತಾಭದಿ ಶೋಭಿಸುತಿಹ
ಸಾಮದೇಭಗಳು ಅಕ್ಷಯ ಸಂಗರದಾಗಾರದಿ
ರಮಣೀಯಾದರಥಂಗಳ ಗಣಿತೋ
ಪಮವಿರಹಿತ ಗೋಭವನದೊಳಿರುತಿವೆ
ಅಮರಧೇನು ವಿಂಗಧಿಕ ಫಣಿಪತಿಗೆ
ಪ್ರಮವೆನೆಗೋವ್ರಜ ಸಂಖ್ಯೆಗಗೋಚರ
ಸುಮಶರಜನಕನ ಶುಭಕರಲೀಲೆಯ ೧

ಅದಕೋ ಭಂಡಾರಮಂದಿರ ಶ್ರೀರಾಮಟಂಕೀವರಹಾ ಮುಂ
ತಾದವಳಿಯನಾಣ್ಯಸುಂದರ ಉದಧಿವೀಚಿಯುಭಾ
ವದಿ ರಾಶಿರಾಶಿಗಳಿವೆ ನವರತ್ನ ಖಚಿತ ವಿ
ವಿಧಭೂಷಣಾಖ್ಯದಿ ಶೋಭಿಸುತ್ತಲಿದೆ
ಸದಮಲ ದಿವ್ಯವಸನಪೀತಾಂಬರ
ವಿದಿರಲಿ ಕಾಣಿಸುತ್ತಿದೆ ಗಿರಿಯಂದದಿ
ಚದುರಸೆ ಉಗ್ರಾಣದಮನೆಯಿದಕೊಳ
ಗಿದೆ ಸರ್ವಾಭೀಷ್ಟದ ವಸ್ತುಚಯಗಳಿ
ಗ್ಯದುರಾಜನ ಪದದರುಶನ ಫಲವಿದು ೨

ದಕ್ಷಿಣಾವರ್ತಶಂಖ ನಿಧಿ ಅನೇಕಕ್ಷೇತ್ರ
ಲಕ್ಷ್ಮೀನಾರಾಯಣ ಸಾಲಿಗ್ರಾಮ ಸಂಪುಟ
ಸಾಕ್ಷಾದ್ವೈಕುಂಠದಂದದಿ ಸ್ತಂಭದೊಳು ಪ್ರ
ತ್ಯಕ್ಷವಾದವಿಗ್ರಹ ತಂಡವಾಡಂಬರದಿ
ವೀಕ್ಷಿಸುದೇವರ ವಿಭವದಮನೆಯೊಳು
ಅಕ್ಷಯವೇದ ಪುರಾಣಶಾಸ್ತ್ರವ ಪ
ರೀಕ್ಷಿಸು ಪುಸ್ತಕಗಳಪರಿಮಿತವಿವೆ
ಲಕ್ಷ್ಮಿಯ ಕರುಣಕಟಾಕ್ಷವೀಕ್ಷಣದಿ
ಲಕ್ಷಣ ಚಾದ್ರಿನೃಸಿಂಹನನುಗ್ರಹ ೩

ವಚನ —

ಈ ಪ್ರಕಾರದಿಂದ ಸಮಸ್ತ ವೈಭವದಿಂ ಪ್ರಶಸ್ತವಾದ ಇಹಪರ ಸಾಧನೋಪೇತವಾದ ಪದಾರ್ಥಂಗಳಂ ನೋಡಿ ಕುಚೇಲನತ್ಯಂತ ವಿಸ್ಮಯಾಂತಃ ಕರಣನಾಗಿ ಶ್ರೀಹರಿಯ ಮಹಾಮಹಿಮೆಯಂ ಅನೇಕ ಪ್ರಕಾರಬಂ ಸ್ತೋತ್ರವಂ ಮಾಡುತ್ತ ಸತಿಯೊಡಗೂಡಿ ಮಾಧ್ಯಾಹ್ನಿಕಾಕೃತ್ಯವಾದ ಸ್ನಾನಸಂಧ್ಯಾನ ದೇವತಾರ್ಚನಾದಿ ಸತ್ಕರ್ಮಂಗಳನಾಚರಿಸಿ ಇಷ್ಟಜನರಿಂದ ಮೃಷ್ಟಾನ್ನವಂ ಭುಂಜಿಸಿ ಸದ್ಭಕ್ತಿಯಿಂದ ಸತ್ಸಂಗದಿಂದ ಕಾಲಕ್ಷೇಪವಂ ಮಾಡುತಿರ್ದನದೆಂತೆನೆ —

ಪದ —

ಕೆರೆಯನೀರನುಕಂಡು ಕೆರೆಗೆಚೆಲ್ಲುತಲಿ
ವರವಪಡೆದವರಂತೆ ಪರಮಸಂಭ್ರಮದಿ ೧

ಹರಿಯಕಾರುಣ್ಯದಿಂದಾದ ಭಾಗ್ಯವನು
ಹರಿಯಚರಣಕೆ ಸಮರ್ಪಣೆಯ ಮಾಡುವನು ೨

ಅರವಟಿಗೆ ಪೂದೋಟವಗ್ರಹಾರಗಳು
ಕೆರೆಕುಂಟೆ ಕೊಳಭಾವಿ ಕ್ರೀಡಾವನಗಳು ೩

ಸಾಲುವೃಕ್ಷಗಳು ಮೃಷ್ಟಾನ್ನಸತ್ರಗಳು
ಆಲಯಂಗಳು ಧರ್ಮಶಾಲೆ ಮಂಟಪವು ೪

ಹರಿಹರರ ದೇವಾಲಯ ಸುಯಜ್ಞಗಳು
ವರುಷಾಶನಂಗಳು ವಸ್ತ್ರದಾನಗಳು ೫

ಶಿಶುಗಳಿಗೆಲ್ಲ ಗೋಕ್ಷೀರದಾನಗಳು
ಪಶುಗಳಿಗೆತೃಣರಾಶಿ ಪಥಿಕರಿಗೆನೆಳಲು ೬

ಸಕಲವಿದ್ಯಾದಾನ ಸಂಸಾರಯುಕ್ತ
ಸಕುಟುಂಬಪೋಷಣ ಚಾರುರಕ್ಷಣೆಯು ೭

ತೀರ್ಥಯಾತ್ರೆಗಳು ಕಾರ್ತೀಕದೀಪಗಳು
ತೀರ್ಥಾಚರಣಗಿಷ್ಟಾರ್ಥಸಿದ್ಧಿಗಳು ೮

ಮಾಸೋಪವಾಸ ಧರ್ಮಗಳನೇಕಗಳು
ಭೂಸುರಪಿತೃದೇವ ಬೃಂದಯಜ್ಞಗಳು ೯

ವಿಪುಲಕನ್ಯಾದಾನ ವಿವಿಧದಾನಗಳು
ಚಪಲವಿಲ್ಲದೆಯೆ ನಿಷ್ಕಾಮದಿಂಮಾಡಿ ೧೦

ಕೃಷ್ಣಾರ್ಪಣಂಗೈದು ಕೃಪೆಯನಾಧರಲಿ
ನಿಷ್ಠೆಯಿಂದಿಡುತ ಮನ್ನಿಸುತ ಸರ್ವರನು ೧೧

ನಿತ್ಯಪ್ರಾತಃಕಾಲ ನಿತ್ಯಕರ್ಮಗಳು
ಸತ್ಯಸದಾಚಾರ ಶ್ರವಣಮನನಗಳು ೧೨

ತಪ್ಪದೇಪ್ರತಿದಿವಸ ದ್ವಾರಕಿಗೆಪೋಗಿ
ಸರ್ಪಶಯನನ ಶ್ರವಣ ಸಂದರುಶನವನು ೧೩

ಪಡೆದುನಿಜಗೃಹಕಾಗಿ ಬರುತಲಿರುತಿರುತ
ಮಡದಿಗರುಹುತಲಿ ಶ್ರೀಹರಿಯಾಚರಣೆಯ ೧೪

ಮಕ್ಕಳಿಗೆ ಉಪನಯನ ಮದುವೆಮುಂತಾದ
ಅಕ್ಕರೆಗಳನುಸಲಿಸಿ ಅಖಿಳವಿದ್ಯೆಗಳ ೧೫

ಕಲಿಸಿ ನಿಪುಣರಮಾಡಿ ಕಮಲಲೋಚನನ
ಕಲಿತ ಸತ್ಕೃಪೆಗವರ ಯೋಗ್ಯರಂ ಮಾಡಿ ೧೬

ಜನಸಮ್ಮತಗಳಿಂದ ಸಕಲಕರ್ಮಗಳ
ಮನವೊಲಿದು ಇಹಪರದಮಾರ್ಗವನುಸರಿಸಿ ೧೭

ಚಿತ್ರದಿಂ ಮಾಡುತ ಪವಿತ್ರನೆಂದೆನಿಸಿ
ಪುತ್ರಪೌತ್ರಕಳತ್ರಮಿತ್ರಬಾಂಧವರ ೧೮

ಒಡಗೂಡಿ ಸುಖದಿಂದ ಕಡಲತಲ್ಪಕನ
ಅಡಿಗಳಂ ಧ್ಯಾನಿಸುತ ಅಮಿತೋತ್ಸವದಲಿ ೧೯

ನಿರ್ಲಿಪ್ತನಾಗಿ ಸನ್ನಿಹಿತ ಸಂಸಾರ
ದುರ್ಲಭವೆನಿಸದೆ ಸುಲಭದಿಂದರಿದು ೨೦

ಸರಸಿಜಪತ್ರ ಜಲಸ್ವರುಪರಹಿತದಲಿ
ಸರಸದೊಳಪ್ಪಂತೆ ಹರಿಪರಾಯಣನಾಗಿ ೨೧

ವಂಶಾಭಿವೃದ್ಧಿಯಿಂ ವರ ಪೂಜ್ಯನಾಗಿ
ಕಂಸಾಂತಕನಭಕ್ತ ಹಂಸಸನ್ನಿಭನು ೨೨

ವರಕುಚೇಲಾಖ್ಯ ಭೂಸುರಶಿರೋರತ್ನ
ನಿರುತಿರ್ದ ಸತ್ಕೀರ್ತಿವೆರೆದು ಮೂರ್ಜಗದಿ ೨೩

ವಚನ —

ಈ ಪ್ರಕಾರದಿಂ ಕುಚೇಲನು ಸುಶೀಲಾ ನಾಮಕಳಾದ ಕಾಂತಾಸಮೇತದಿಂದ ಪುತ್ರಪೌತ್ರ ವಂಶಾಭಿವೃದ್ಧಿಯಾಗಿ ರಮಾಬ್ರಹ್ಮರುದ್ರೇಂದ್ರಾದಿ ನಿಯಾಮಕನಾದ ಪರಬ್ರಹ್ಮನಾದ ಪರಮಾನಂದಮಯನಾದ ಸರ್ವಸಾರ ಭೋಕ್ತೃವಾದ ಶ್ರೀ ಕೃಷ್ಣದೇವರಿಗೆ ಒಪ್ಪಿಡಿಯವಲಕ್ಕಿಯಂ ನಿವೇದನವಂ ಮಾಡಿದ ಮಹಾಮಹಿಮೆಯಿಂದ ಭಾಗ್ಯವಂತನಾಗಿ ಇಹದಲ್ಲಿ ಸೌಖ್ಯವಂ ಪರದಲ್ಲಿ ಮೋಕ್ಷವಂ ಸಂಪಾದನೆಯಂಗೈದು ಜ್ಞಾನ ಭಕ್ತಿ ವೈರಾಗ್ಯ ಭಾಗ್ಯದಿಂದ ಯೋಗ್ಯನಾಗಿ ಸುಖದಿಂದಿರುತಿರ್ದನೆಂದು ಪ್ರಾಯೋಪವೇಶನಾದ ಪರೀಕ್ಷಿತ ಮಹಾರಾಯಗೆ ಶುಕಯೋಗೀಂದ್ರರು ನಿರೂಪಿಸಿದ ಕುಚೇಲೋಪಾಖ್ಯಾನವನ್ನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಸಕಲ ಮುನೀಂದ್ರರಿಗೆ ರೋಮಹರುಷಣಿಯಾದ ಸೂತಪೌರಾಣೀಕರು ನಿರೂಪಿಸಿದ ಈ ಪುಣ್ಯ

ಕಥೆಯನ್ನು ಪರಿಸಮಾಪ್ತಿಯಂ ಮಾಡುವುದಕ್ಕೋಸ್ಕರ ಧವಳಶೋಭಾನೆ ಮಂಗಳಾರ್ತಿಗಳಂ ಪೇಳಿದನದೆಂತೆನೆ.—

ರಾಗ ನವರೋಜು ಝಾಪುತಾಳ

ಸೋಮಕಾಸುರನೆಂಬ ತಾಮಸನಸುವನಿ
ರಾಮವಗೈದು ಸುರಸ್ತೋಮಕಮೃತವೀಯೆ
ಭೂಮಿಧರವನುದ್ದಾಮದಿ ಧರಿಸಿದ
ಶ್ರೀಮನ್ಮಂಗಳಧಾಮ ರಮಾಧಿಪ
ಸ್ವಾಮಿ ಬಾರೆಂದು, ಕರೆದರು, ಶೋಭಾನೆ ೧

ಧರಣಿದೇವಿಯನಪಹರಿಸಿದ ದನುಜನ
ಹರಣವಳಿದು ನಿಜಶರಣಬಾರೆಂದು ನಿನ್ನ
ಕರೆಯಲು ಕಂಭದಿ ನರಹರಿರೂಪವ
ಧರಿಸಿದ ವಿಶ್ವಂಭರ ಕರುಣಾಕರ
ಸರಸಿಜನಾಭಾ, ಹಸೆಗೇಳು, ಶೋಭಾನೆ ೨

ಬಲಿಯ ದಾನವಬೇಡಿ ನೆಲನ ಈರಡಿಮಾಡಿ
ಗೆಲಿದು ದುಷ್ಟರಾಯರ ಕುಲವ ಕೌಸಲ್ಯಾಗರ್ಭ
ಜಲನಿಧಿಯಲಿ ಪ್ರಜ್ವಲಿಸಿದ ಶಶಿಯಂ
ತಲಘು ಪರಾಕ್ರಮನಿಲಯನೆ ರಘುಕುಲ
ತಿಲಕಬಾರೆಂದು, ಕರೆದರು, ಶೋಭಾನೆ ೩

ದಾರಿದ್ರ್ಯಕಂಜಿ ತನ್ನ ನಾರಿಪೋಗೆನ್ನೆ ಸಖ
ನಾರಾಯಣನೆಂತೆಂದು ಸಾರಿದ ಸುಧಾಮನ
ಸಾರರಹಿತ ಸಂಸಾರಭಯವ ನಿ
ವಾರಣಗೊಳಿಸಿದ ಕಾರಣವರದ ಮ
ಹೀರಮಣ ಕೃಷ್ಣಾ, ಹಸೆಗೇಳು, ಶೋಭಾನೆ ೪

ಹರನಬಾಣದಿನಿಂದು ಪುರವನುರುಹಿ ಗರುಡ
ತುರದ ತುರಗವೇರಿಬರುವ ಶ್ರೀನಿವಸಾಲ
ಪುರಿನಿಲಯನೆ ಖಾದಿರಿ ನರಸಿಂಹ ಸು
ಚರಿತನೆ ತ್ರಿಜಗದ್ಭರಿತನೆ ಪರತರ
ಪರಮಾತ್ಮ ಕೃಷ್ಣಾ, ಹಸಗೇಳು, ಶೋಭಾನೆ ೩೩

ರಾಗ ಮೋಹನ ಝಾಪುತಾಳ

ಶ್ರೀನಿಗಮವನಪಹರಿಸಿದುದನ ತಾನದಕೇಳಿ ನಾರಾಯಣಾ
ದಾನವಗಜ ಪಂಚಾನನುವೇ
ದಾನುದ್ಧಾರಕನಾಗಿ ವಿರಿಂಚಿಗೆ
ತಾನೊಲಿದಿತ್ತ ಸುಮೀನ ಶರೀರಗೆ
ಮಾಣಿಕದಾರತಿಯ, ಬೆಳಗಿರೆ ೧

ಮೊತ್ತವಾಗಿ ದೇವದಾನವರು ಒತ್ತಿ ಜಲಧಿಯ ಮಥಿಸಲು
ಉತ್ತಮಗಿರಿಧುರವೆತ್ತಿ ರಸಾತಳ
ಕತ್ತಲಿಳಿಯೆ ನಿಜಚಿತ್ತದಿ ಕರುಣಿಸಿ
ಮತ್ತೆನಗೇಂದ್ರನ ಪೊತ್ತ ಕೂರುಮಗೆ
ಮುತ್ತಿನಾರತಿಯ, ಬೆಳಗಿರೆ ೨

ಅವನಿದೇವಿಯ ಚೋರತನದಿ ದಿವಿಜಾರಿವೈಯಲು ಭರದಿ
ಅವನ ಪಾತಾಳದ ಭವನದಿ ಮರ್ದಿಸಿ
ಸವಿನುಡಿಯಲ್ಲಿ ಭೂಯುವತಿಯ ಪಾಲಿಸಿ
ದವನಾಗಿಹ ಶ್ವೇತವರಹ ರೂಪಗೆ
ಹವಳದಾರತಿಯ, ಬೆಳಗಿರೆ ೩

ಸುರರಿಪುವಿನ ಬಾಧೆಯಿಂದ ತರಳ ಪ್ರಹ್ಲಾದ ಗೋವಿಂದ
ಶರಣಾಗೆನಲತಿ ಕರುಣಾಭರಣದಿ
ಶರಣನಿಗಾಗಿಯೆ ಹಿರಣ್ಯಕಶಿಪುವ
ಹರಣವನಳಿದಿಹ ನರಹರಿರೂಪಗೆ
ಮರಕತದಾರತಿಯ, ಬೆಳಗಿರೆ ೪

ಭೂಗಗನವನೀರಡಿಯು ಬೇಗದಿ ಮಾಡಿಯಾ ಬಲಿಯ
ಆಗ ಪಾತಾಳಕೆ ಸಾಗಿಸಿ ಇಂದ್ರನಿ
ಗಾಗಿ ಭುವನಗಳ ಕೈಗೂಡಿಸಿದ ಮ
ಹಾಗುಣ ವಾಮನಗನುರಾಗದಿ ಪುಷ್ಯ
ರಾಗದಾರತಿಯು, ಬೆಳಗಿರೆ ೫

ದುರ್ಜನರಾಯರ ಕುಲವ ನಿರ್ಜಿಸಿ ನಿಖಿಳಭೂತಳವ
ಸಜ್ಜನರಹ ಭೂನಿರ್ಜರರಿಗೆ ಇ
ತ್ತಾರ್ಜಿಸಿ ಕೀರ್ತಿಯ ಮೂರ್ಜಗದೊಳಗೆ
ನಿರ್ಜರವಂದ್ಯ ಪರಶುರಾಮಗೆ ವರ
ವಜ್ರದಾರತಿಯು, ಬೆಳಗಿರೆ ೬

ಭೂಲಲನೆಗೆ ಭಾರವನು ಕೀಲಿಸಿದ ದಶಾಸ್ಯನನು
ಕೊಲಿಸಿ ಜಗಗಳ ಪಾಲಿಸಿ ಸೀತಾ
ಲೋಲನೆಂದೆನಿಸಿದ ಲೀಲಾಮಾನುಷ
ಶೀಲ ರಾಮನಿಗೆ ನೀಲನಿಭಾಂಗಗೆ
ನೀಲದಾರತಿಯು, ಬೆಳಗಿರೆ ೭

ಸಾಧು ಸುಧಾಮನ ತನುವ ಬಾಧಿಸುತಿಹ ಬಡತನವ
ಛೇದಿಸಿದಯದೊಳು ಶ್ರೀಧರನೆನಿಸಿಹ
ಭೂಧರವರ ಮುರುಳೀಧರ ನವಮಧು
ರಾಧರಯುತ ಪಂಕಜೋದರ ಕೃಷ್ಣಗೆ
ಗೋಮೇಧಿಕದಾರತಿಯು, ಬೆಳಗಿರೆ ೮

ಆರ್ಯಾಧವನ ಮನವನು ಒಲಿಸಿ ಶೌರ್ಯಬಾಣನೆಂದೆನಿಸಿ
ಧೈರ್ಯದಿ ತ್ರಿಪುರದ ಕಾರ್ಯವಗೆಲಲನಿ
ವಾರ್ಯದ ದೈತ್ಯರ ಭಾರ್ಯರಮನವನು
ಚೌರ್ಯವಗೊಳಿಸಿದಾಶ್ಚರ್ಯ ಬುದ್ಧಗೆ ವೈ
ಡೂರ್ಯದಾರತಿಯು, ಬೆಳಗಿರೆ ೯

ಸುಂದರವಾದ ತುರಗವನಂದದಿ ಧರಿಸುತಲೀ ವ
ಸುಂಧರಭಾರಕ ವೃಂದವನಳಿದ ಮು
ಕುಂದಕಲಿಕಿ ಮುಚುಕುಂದವರದನಿಗೆ
ಮಂದಗಮನೆಯರು ಚೆಂದದಿಂದಲಿ ಬೇಗ
ಕುಂದಣದಾರತಿಯ, ಬೆಳಗಿರೆ ೧೦

ಮಂಗಳ ಫಲದ ಉದಾರರಂಗ ದಶವಿಧಾವತಾರ
ಹಿಂಗದೆ ಧರಿಸಿ ಶುಭಂಗಳ ಭಕುತರ
ಸಂಘಕೆ ಕರುಣಿಪ ಮಂಗಳೆಯರಸ ಭು
ಜಂಗಶಯನ ನರಸಿಂಗನಡಿಗಳಿಗೆ
ಮಂಗಳಾರತಿಯ, ಬೆಳಗಿರೆ ೧೧

ರಾಗ ಭೈರವಿ ಝಂಪತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ಪ
ಜಯವಿಜಯವಿನುತಗೆ ಜಯವಿಜಯಸಖನಿಗೆ ಅ.

ನಿಗಮಗಳ ಸಲಹಿನಗವನು ಪೊತ್ತು ಮೇದಿನಿಯ
ಬಗೆದು ತರಳನಿಗೊಲಿದು ಬಲಿಯಕಾಯ್ದು
ಜಗತೀಸುರರಿಗೊಲಿದು ಶಿಲೆಯರಕ್ಷಿಸಿ ಗೋಪಿ
ಮಗುವಾಗಿ ಶಿವಗೊಲಿದುಬಹ ದೇವಗೆ ೧

ತಮನಮರ್ದಿಸಿ ಜಲಧಿನಿಂದು ಹೈರಣ್ಯಕರ
ಸಮೆಸಿ ಧರಣಿಯನಳಿದು ನೃಪರನಳಿದು
ದ್ಯುಮಣಿ ಶಶಿಕುಲದೊಳವತರಿಸಿ ಶರನೆಂದೆನಿಸಿ ಸಂ
ಭ್ರಮದಿಹಯವೇರುತಿಹ ಕಮಲೇಶಗೆ ೨

ಉಭಯರೂಪದಿ ಜಲದೊಳುಭಯರೂಪದಿ ವನವಿ
ಭವದಿಂ ಜನಿಸಿ ವಟುವೆನಿಸಿ ಪಿತರ
ಶುಭವಾಕ್ಯಗಳ ಸಲಿಸಿ ಪುರವಳಿದು ಕಲಿರೂಪ
ದಿಭಸಿಂಹ ನವಸಾಲನರಸಿಂಹಗೆ ೩

ರಾಗ ವಾಡಿ ಛಾಪುತಾಳ

ಮಂಗಳದೇವಿಗೆ ಮಂಗಳ ಸರ್ವ
ಮಂಗಳವಿನುತೆಗೆ ಮಂಗಳ ಪ.

ಜಾತರಹಿತೆಗೆ ವಿಧೂತಕಿಲ್ಬಿಷೆಗೆ
ಸೀತಾದೇವಿಗೆ ಮಂಗಳ
ಪ್ರೀತಿಯಿಂದಲಿ ರಘುನಾಥನರಸಿ ಭೂ
ಜಾತೆಗೆ ಪುನೀತೆಗೆ ಮಂಗಳ ೧

ರುಕುಮನ ಅನುಜೆಗೆ ರುಕುಮದುಕೂಲೆಗೆ
ರುಕುಮಿಣಿದೇವಿಗೆ ಮಂಗಳ
ಯುಕುತದಿ ಕೃಷ್ಣನ ಮುಕುತಾಂಗನೆಗೆ ಭೀ
ಷ್ಮಕನ ಕುಮಾರಿಗೆ ಮಂಗಳ ೨

ಅಕ್ಷಯರೂಪೆಗೆ ಲಕ್ಷಣಶೀಲೆಗೆ
ಲಕ್ಷುಮಿದೇವಿಗೆ ಮಂಗಳ
ಸಾಕ್ಷಾನ್ನಪಸಾಲ ರಕ್ಷಿಪ ನರಹ
ರ್ಯಕ್ಷನರಾಣಿಗೆ ಮಂಗಳ ೩

ಧ್ರುವ —

ಇಂತೆನುತ ಶ್ರೀಮದನಂತರೂಪನಿಗೆ
ಕಂತುಜನಕನಿಗೆ ಶ್ರೀಕಾಂತ ಕೃಷ್ಣನಿಗೆ ೧

ಸಂತತಾನಂದ ಸಾನಂತಶಯನನಿಗೆ
ಚಿಂತಿತಾರ್ಥವನೀವ ಚಿಂತಾಯಕನಿಗೆ ೨

ಮಂಗಳಾಂಗನಿಗೆ ಹೇಮಾಂಗವರದನಿಗೆ
ಗಂಗಾಜನಕ ಶ್ರೀರಂಗನಾಯಕಗೆ ೩

ಬಾಲಗೋಪಾಲನಿಗೆ ಶ್ರೀಲಲಾಮನಿಗೆ
ಬಾಲೇಂದುಫಾಲನಿಗೆ ನೀಲವರ್ಣನಿಗೆ ೪

ಪಾಲಿತಾಖಿಳಗೆ ಕುಚೇಲವರದನಿಗೆ
ಲೀಲಾವಿನೋದಂಗೆ ಮೂಲಪುರುಷಂಗೆ. ೫

ದೇವರದೇವನಿಗೆ ವಸುದೇವನಂದನಗೆ
ದೇವಕೀಸುತಗೆ ಬಲದೇವಾನುಜನಿಗೆ ೬

ಭಕ್ತರನು ಪೊರೆವನಿಗೆ ಶಕ್ತಿಮಂತನಿಗೆ
ಮುಕ್ತಿದಾಯಕನಿಗೆ ಮುರವಿದಾರನಿಗೆ ೭

ಕಾಳೀಯಮರ್ದನಗೆ ಕಂಸಶಿಕ್ಷನಿಗೆ
ಶ್ರೀಲಲಾಮನಿಗೆ ಗೋಪಾಲಬಾಲನಿಗೆ ೮

ಪಾಂಡವಪ್ರಿಯನಿಗೆ ಭಯನಿವಾರಣಗೆ
ಶುಂಡಾಲರಕ್ಷಕಗೆ ಶೂರವಂಶಜಗೆ ೯

ಪ್ರಹ್ಲಾದವರದನಿಗೆ ಪ್ರಾಣಕಾಂತನಿಗೆ
ಅಹಲ್ಯಾಘವಿದಳನಿಗೆ ಅಂಬುಜೋದರಗೆ ೧೦

ಸ್ತಂಭೋದ್ಭವಗೆ ದೋಸ್ತಂಭಚತುರನಿಗೆ
ಕಂಭಿನೀಧವಗೆ ಪೀತಾಂಬರಧರಗೆ ೧೧

ಶ್ರೀರಾಮಚಂದ್ರನಿಗೆ ಸೀತಾರಮಣನಿಗೆ
ನಾರಾಯಣಗೆ ಶ್ರೀಖಾದ್ರಿನರಹರಿಗೆ ೧೨

ಅಂಕಿತವಾಗಿ ಸಾಲಂಕಾರದಿಂದ
ಪಂಕಜಾಕ್ಷನ ಪಾದಪಂಕೇಜಗಳಿಗೆ ೧೩

ಹರುಷದಿಂದರ್ಪಿಸೆ ಮಹಾಭಕುತಿಯಿಂದ
ವಿರಚಿಸಿದೆನಿದ ಜಗದ್ವಿಖ್ಯಾತವಾಗೆ ೧೪

ಬಿರುದಾದ ನವಸಾಲಪುರಿ ಶಾಸನಾಂಕ
ಕರುಣಾಬ್ಧಿಯುಹ ಉಲುಚುಕಮ್ಮೆ ವಂಶಜನು ೧೫

ಚಿತ್ರವಿಶ್ವಾಮಿತ್ರಗೋತ್ರ ಸುಪವಿತ್ರ
ಪಾತ್ರನಾಪಸ್ತಂಭ ಸೂತ್ರಸುಚರಿತ್ರ ೧೬

ಧೀರಾತ್ಮರಾದ ಕಂಠೀರವವರಪೌತ್ರ
ಶ್ರೀರಂಗನಾಮಾಖ್ಯ ಶೇಖರರಪುತ್ರ ೧೭

ಗಿರಿಯಂಬಿಕಾಗರ್ಭಶರ ರಾಶಿರಾಜೇಂದ್ರ
ನರಸಿಂಹಚರಣ ಕರುಣಾರಸಾಭರಣ ೧೮

ಪರಮವೈಷ್ಣವರ ಪದಪದ್ಮಷಟ್ಚರಣ
ಗುರುವರ್ಯರಾದ ಚಂದ್ರರಸಾರ್ಯಶಿಷ್ಯ ೧೯

ನಾದ ಶ್ರೀಕವಿ ತಿಪ್ಪಣಾರ್ಯನಿಂ ರಚಿತ
ವಾದ ಕುಚೇಲನಾಮಾಖ್ಯ ಚಾರಿತ್ರ ೨೦

ವಿದು ಶ್ರೀನೃಸಿಂಹಪದಪದ್ಮಗಳಿಗೆ
ಮುದದಿಂ ಸಮರ್ಪಿಸಿದೆ ಸದುಭಕ್ತಿಯಿಂದ ೨೧

ಯತಿಗಣಪ್ರಾಸವೇ ಮೊದಲಾದ ಲಕ್ಷಣವ
ನತಿಶಯವನರಿಯೆ ಶ್ರೀಪತಿಯೆ ಗತಿಯೆನಗೆ ೨೨

ಎನ್ನ ವಿಷವಾಕ್ಯದಿಂದೇನು ಲಾಭಗಳು
ಪನ್ನಗೇಂದ್ರನಮೇಲೆ ಪವಳಿಸಿರುವಂಗೆ ೨೩

ಎನ್ನಮೃತವಾಕ್ಯಂಗಳಿಂದೇನು ಫಲವು
ಪನ್ನಗಾರಿಧ್ವಜಗೆ ಪರಮಪುರುಷನಿಗೆ ೨೪

ಸರ್ವಶಬ್ದಾರ್ಥ ಶ್ರೀಹರಿಯಲ್ಲದನ್ಯ
ಇರ್ಪುದೇ ಶಾಸ್ತ್ರದೋಳ್ ವಿಷ್ಣುಮಯಂಜಗತು ೨೫

ಆದರಿಂದ ಈ ಕೃತಿಯನಾದರಿಸಿ ಬುಧರು
ಮುದದಿಂದಲಾಲಿಪುದು ಮುಕುರದಂದದಲಿ ೨೬

ತಪ್ಪಿಲ್ಲದಿರುವುದೇ ಧರ್ಮಮಾನಸರು
ಒಪ್ಪದಿಂತಿದ್ದುವುದು ವರ್ಣಗಳನೊಲಿದು ೨೭

ಆನಂದಭರಿತದಿಂದತಿ ಭಕ್ತಿಯಿಂದ
ಸಾನುರಾಗದಿ ಪರಮಸಂತೋಷದಿಂದ ೨೮

ಈ ಚರಿತ್ರೆಯನು ಹೇಳುವರ ಕೇಳುವರ
ವಾಚಿಸುತ ಪಠಿಸುವರ ಬರೆಯುವರನಿವರ ೨೯

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೯ | ೫ | ಪರಶು | ಪರುಶ |
| ೨೪ | ೨೧ | ಬಿಂಬಾಸ್ಯೆ | ಬಿಂಬಾಸ್ಯೈ |
| ೩೩ | ೧ | ಸೋಮುಢರನ | ಸೋಮಧರನ |
| ೩೬ | ೫ | ಕಾಸ್ತುಭೋಜ್ವಲ | ಕೌಸ್ತುಭೋಜ್ವಲ |
| ೫೫ | ೨ | ತಿರ್ದನು | ತಿರ್ದರು |
| ೬೧ | ೨೧ | ಮರಳಿ | ಮುರಳಿ |
| ೬೨ | ೬ | ತಿಲಕ ಸುಮುದ | ತಿಲಕುಸುಮುದ |
| ೮೦ | ೨ | ಹೃದ್ಯಾ | ಹೃದ್ಯಂ |
| ೮೦ | ೬ | ಬೋಧಾತ್ಮರಿಂ | ಬೋಧಾತ್ಮರಂ |
| ೮೦ | ೨೩ | ಬೋಧಿಸ್ವೈಮಾರ್ಯ | ಬೋಧಿಸ್ವೈಯಾರ್ಯ |
| ೮೪ | ೨೫ | ಠಾಜವಂಶಾಗ್ರಣೀ | ರಾಜವಂಶಾಗ್ರಣೀ |
| ೮೬ | ೨೪ | ಕರ್ಮಂಗಳಂ | ಕರ್ಮಂಗಳುಂ |
| ೮೯ | ೧೬ | ಬಳಲುಪರವರು | ಬಳಲುವರವರು |
| ೯೧ | ೧೫ | ಪೊರವೊಡಲು | ಪೊರಮಡಲು |
| ೯೨ | ೬ | ರಾತ್ರಿಯೊಂ | ರಾತ್ರಿಯೊ |
| ೯೩ | ೫ | ನಮ್ಮವನು | ನಮ್ಮುವನು |
| ೧೧೦ | ೧೭ | ಬಗೆಯುನಠಿಯು | ಬಗೆಯುನರಿಯು |
| ೧೧೭ | ೭ | ಗರುಗೋಡೆಯ | ಗರುಗೊಡೆಯು |
| ೧೨೦ | ೩ | ಚಕ್ರದರಾಬ್ಜನಾಭ | ಚಕ್ರಧರಾಬ್ಜನಾಭ |
| ೧೨೯ | ೪ | ಮತಿಯೋಳಾಗ | ಮತಿಯೊಳಾಗ |
| ೧೩೦ | ೮ | ವರಿರತುನ | ವರರತುನ |
| ೧೩೭ | ೨೦ | ಕಾಪಾಡಿ | ತಾಪಾಡಿ |
| ೧೩೪ | ೭ | ಶಮಣ | ರಮಣ |
| ೧೩೬ | ೨೪ | ಸಕ್ಕೃಪೆಗವರ | ಸತ್ಕೃಪೆಗವರ |
| ೧೩೯ | ೭ | ಪಂಚಾನನು | ಪಂಚಾನನ |
| ೧೪೩ | ೧೨ | ಕಂಭಿಣೀಧವಗೆ | ಕುಂಭಿಣೀಧವಗೆ |



ಆ ಕುಚೇಲನಿಗೊಲಿದು ಬೇಕಾದಫಲವ
ಶ್ರೀಕರದಿ ಕರುಣಿಸಿದ ಶ್ರೀಕೃಷ್ಣದೇವ ೩೦

ಇಹಪರದ ಸೌಖ್ಯಗಳ ವಿಹಿತದಿಂದಿತ್ತು
ಬಹುಕಾಲರಕ್ಷಿಪನು ಭಕುತವತ್ಸಲನು ೩೧

ಸಂದೇಹವೇನಿದಕೆ ಸಾಕ್ಷಿಯೇ ಭಕ್ತಿ
ಇಂದಿರೇಶನು ಒಲಿವನೆಂಬುದು ವೇದಸಿದ್ಧ ೩೨

ಪರಮಾತ್ಮ ಶ್ರೀರಮಾಬ್ರಹ್ಮಾದಿವಂದ್ಯ
ಹರಿಯಾದ ಶ್ರೀಖಾದ್ರಿನೃಹರಿಕೃಪೆಯಿಂದ ೩೩

ಭೂಚಕ್ರದೋಳ್ ಮಹಾಪೂಜಿತವಾಗಿ
ಆಚಂದ್ರತಾರಾರ್ಕವಾಗಿರಲಿ ಈ ಕೃತಿಯು ೩೪

ಶ್ರೀ ಕುಚೇಲೋಪಾಖ್ಯಾನವು ಸಂಪೂರ್ಣವು

ಶ್ರೀ ವಾಯು ಹನುಮದ್ಭೀಮ ಮಧ್ವಾಂತರ್ಗತ
ಶ್ರೀ ಹಯಗ್ರೀವ ರಾಮಕೃಷ್ಣ ವೇದವ್ಯಾಸಾತ್ಮಕ
ಶ್ರೀ ಲಕ್ಷ್ಮೀನೃಸಿಂಹ ಪ್ರೀಯತಾಂ

ಶ್ರೀ ಕೃಷ್ಣಾರ್ಪಣಮಸ್ತು

ಓಂ ತತ್ಸತ್

